# ಶೂದ್ರ

ಬೆಲೆ: 2-50



'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 1-2 ನವೆಂಬರ್-ಡಿಸೆಂಬರ್ 1986 ಸಂಪುಟ : 13

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ-ಆನಂದಮೂರ್ತಿ-ಮಹೇಶ್

ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂದಾ ಕಳಿಸಿ. ಲೇಖನ ಕಳಿಸುವಾಗ
15 ಪೈಸೆಯ ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಕಳಿಸುವವರು
2 ರೂ ಹೆಚ್ಚು ಮರಿ ತುಂಬಿ.

ವಾರ್ಷಿಕ ಚಂದಾ : 25 ರೂ. (ಸಂಸ್ಥೆಗಳಿಗೆ ಹಾಗೂ ಪುಸ್ತಕ ಭಂಡಾರಗಳಿಗೆ
30 ರೂ) ಆಜೀವ ಚಂದಾ : 250 ರೂ (ಐದು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ.ಆರ್. ಕಾಲೇಜ್ (ಅಂಚೆ)
ಬೆಂಗಳೂರು–560 029

ಮುಖಪುಟದ ಕಲಾವಿದರು : ಪಿಕಾಸೊ
ಹಿಂಬದಿ ಪುಟದ ಕಲಾವಿದರು : ಉಡುಪಿಯ ರಮೇಶ್‌ರಾವ್

ಈ ಬಾರಿಯ ಶೂದ್ರ ನವೆಂಬರ್-ಡಿಸೆಂಬರ್ ಸಂಚಿಕೆಯನ್ನು ಸೇರಿಸಿ ತರುತ್ತಿದ್ದೇವೆ.
ಕೆಲವು ತೊಂದರೆಗಳಿಂದ ಈ ರೀತಿಯಾಯಿತು. ಇದಕ್ಕೆ ಸಂಬಂಧಿಸಿದ ಮಿಕ್ಕ
ಪುಟಗಳನ್ನು ಜನವರಿ ಸಂಚಿಕೆಯಲ್ಲಿ ತುಂಬಿಕೊಡುತ್ತಿದ್ದೇವೆ.
ಸಹಕರಿಸಬೇಕಾಗಿ ವಿನಂತಿ.

ಎರಿಕ್ ಫ್ರಾಮ್

# ಹಿಂಸೆಯ ರೂಪಗಳು

ಓ. ಎಲ್. ನಾಗಭೂಷಣಸ್ವಾಮಿ

ಹಿಂಸೆಯಲ್ಲಿ ಅನೇಕ ವಿಧಗಳಿವೆ. ಒಂದೊಂದು ಬಗೆಯ ಹಿಂಸೆಗೂ ಬೇರೆ ಬೇರೆ ಕಾರಣಗಳಿರುತ್ತವೆ. ಈ ಕಾರಣಗಳು ಒಳ ಮನಸ್ಸಿನಲ್ಲಿ ಹುದುಗಿರುತ್ತವೆ. ಮನುಷ್ಯರ ವರ್ತನೆ ಅರ್ಥವಾಗಬೇಕಾದರೆ. ವರ್ತನೆಗೆ ಕಾರಣವಾದ ಸಂಗತಿಗಳನ್ನು ತಿಳಿಯಬೇಕು. 'ಹಿಂಸೆ'ಯ ವರ್ತನೆಯ ಬಗೆಗಳನ್ನೂ, ಕಾರಣಗಳನ್ನೂ, ಈಗ ತಿಳಿಯಲು ಯತ್ನ ಮಾಡೋಣ,

**ಆಟದ ಹಿಂಸೆ** ತುಂಬ ಸಹಜವಾದದ್ದು. ಇದರಲ್ಲಿ ರೋಗಲಕ್ಷಣವಿಲ್ಲ, ವಿನಾಶದ ಉದ್ದೇಶವಿಲ್ಲ, ದ್ವೇಶದ ಕಾರಣವಿಲ್ಲ. ಆಟಗಾರ ತನ್ನ ಕೌಶಲ್ಯವನ್ನು ತೋರಿಸುವಾಗ ಹಿಂಸೆಯನ್ನು ಬಳಸಿಕೊಳ್ಳಬಹುದು. ನಾನು ಇನ್ನೊಬ್ಬನ ಮೈಮೇಲೆ ಬೀಳಬೇಕು. ಇನ್ನೊಬ್ಬನನ್ನು ನೋಯಿಸಬೇಕು, ಹಾಗೆ ಬಿದ್ದು, ಬೀಳಿಸಿ. ನೋಯಿಸಿ ನನ್ನ ಹಿರಿಮೆ ತೋರಿಸಬೇಕು ಎಂಬಂಥ ಆಸೆಗಳಿಗೆ ರೂಪಕೊಡುವಂಥ ನಿಯಮಗಳೇ ಅನೇಕ ಆಟಗಳಲ್ಲಿರುವುದನ್ನು ಗಮನಿಸಬಹುದು. ಆದರೂ ಬಾಕ್ಸಿಂಗ್, ಕುಸ್ತಿ ಇಂಥ ಕಾಳಗ ಕಲೆಯ ಆಟಗಳಲ್ಲಿ ಆಕಸ್ಮಾತ್ತಾಗಿ ಒಬ್ಬ ಆಟಗಾರ ಸತ್ತರೂ ಕೊಲೆ ಮಾಡುವುದು ಆಟದ ಉದ್ದೇಶವಲ್ಲ. ಆಟಗಳಲ್ಲಿ ಕಾಣುವ ಹಿಂಸೆ ಕೌಶಲ್ಯವನ್ನು ತೋರುವ ಉದ್ದೇಶದಿಂದ ಹುಟ್ಟಿದ್ದೇ ಹೊರತು, ವಿನಾಶದ ಆಸೆಯಿಂದ ಹುಟ್ಟಿದ್ದಲ್ಲ.

**ಪ್ರತಿಕ್ರಿಯೆಯ ರೂಪದ ಹಿಂಸೆ** : ತನ್ನ ಅಥವ ಬೇರೆಯವರ ಜೀವ, ಸ್ವಾತಂತ್ರ್ಯ, ಗೌರವ. ಆಸ್ತಿ ಇಂಥವುಗಳನ್ನು ರಕ್ಷಿಸುವುದಕ್ಕೆಂದು ಮನುಷ್ಯ ಹಿಂಸೆಯಲ್ಲಿ ತೊಡಗಬಹುದು. ಅದು ಅತಿ ಸಾಮಾನ್ಯರೂಪದ, ಹೆಚ್ಚು ಪ್ರಮಾಣದಲ್ಲಿ ಕಾಣಸಿಗುವ ಹಿಂಸೆ. ಈ ಬಗೆಯ ಹಿಂಸೆಯ ಬೇರು "ಭಯ"ದಲ್ಲಿದೆ. ಭಯ ನಿಜವೂ ಇರಬಹುದು, ಕಲ್ಪನೆಯೂ ಇರಬಹುದು. ಭಯಕ್ಕೆ ಪ್ರತಿಕ್ರಿಯೆಯಾಗಿ ಹಿಂಸೆ ಹುಟ್ಟುತ್ತದೆ. ಪ್ರತಿಕ್ರಿಯೆಯ ಹಿಂಸೆ ಜೀವ ರಕ್ಷಕವಾದದ್ದು. ವಿನಾಶವ ಉದ್ದೇಶದಿಂದ ಹುಟ್ಟಿದ್ದಲ್ಲ. ಉದಾತ್ತವಾದ ಧಾರ್ಮಿಕ ಅರ್ಥದಲ್ಲಿ ಯಾವ ರೀತಿಯ ಕೊಲೆಯೂ, ಹಿಂಸೆಯೂ ಒಳ್ಳೆಯದಲ್ಲ. ಎನ್ನಬಹುದು. ಆದರೂ ರಕ್ಷಣೆಯ

---

ಓ. ಎಲ್. ನಾಗಭೂಷಣಸ್ವಾಮಿ, ಇಂಗ್ಲೀಷ್ ಅಧ್ಯಾಪಕ, ಸಹ್ಯಾದ್ರಿ ಕಾಲೇಜ್, ಶಿವಮೊಗ್ಗ.

ಉದ್ದೇಶಕ್ಕಾಗಿ ಬಳಕೆಯಾಗುವ ಹಿಂಸೆಗೂ, ವಿನಾಶದ ಆಸೆಯಿಂದಲೇ ಹುಟ್ಟುವ ಹಿಂಸೆಗೂ ವ್ಯತ್ಯಾಸವಿರುವುದು ನಿಜವಷ್ಟೇ? ಪ್ರತಿಕ್ರಿಯೆಯ ರೂಪದ ಹಿಂಸೆಯಲ್ಲಿ ಬುದ್ಧಿಯ ಲೆಕ್ಕಾಚಾರವಿರುತ್ತದೆ. ಹಿಂಸೆಯ ತೀವ್ರತೆಯು ಅದಕ್ಕೆ ಕಾರಣವಾದ ಘಟನೆಯ ತೀವ್ರತೆಗೆ ಅನುಗುಣವಾಗಿರುತ್ತದೆ.

ಅನೇಕಬಾರಿ ಭಯಕ್ಕೆ ನಿಜವಾದ ಕಾರಣವಿಲ್ಲದಿದ್ದರೂ 'ಕಾರಣ ಇದೆ' ಎಂಬ ಭ್ರಮೆಯನ್ನು ಹುಟ್ಟಿಸುವುದು ಸಾಧ್ಯವಾಗುತ್ತದೆ. ರಾಜಕೀಯ ಮುಖಂಡರು, ಧಾರ್ಮಿಕ ನಾಯಕರೂ ಹಿಂಬಾಲಕರಲ್ಲಿ ಭಯವನ್ನು ಬಿತ್ತುತ್ತಾರೆ. 'ಶತ್ರು'ಗಳಿಂದ ನಿಮಗೆ ಭಯ ಇದೆ ಎಂದು ನಂಬಿಸುತ್ತಾರೆ. ಆ ನಂಬಿಕೆಯ ಆಧಾರದ ಮೇಲೆ ಜನರಲ್ಲಿ ಹಿಂಸೆಯ ದ್ವೇಷದ ಪ್ರತಿಕ್ರಿಯೆ ಹುಟ್ಟುವಂತೆ ಮಾಡುತ್ತಾರೆ. ಧರ್ಮಯುದ್ಧ, ಅಧರ್ಮಯುದ್ಧ ಎಂಬ ವ್ಯತ್ಯಾಸ ಅರ್ಥವಿಲ್ಲದ್ದು. ಯಾಕೆಂದರೆ ಯುದ್ಧದಲ್ಲಿ ತೊಡಗುವ ಪ್ರತಿಯೊಂದು ಪಕ್ಷವೂ ತಾನು ತನ್ನನ್ನು ರಕ್ಷಿಸಿಕೊಳ್ಳಲೆಂದು ಯುದ್ಧಕ್ಕೆ ಇಳಿಯಬೇಕಾಯಿತೆಂದು ಹೇಳುತ್ತದೆ. ಎಂಥ ದುರಾಕ್ರಮಣವನ್ನೂ ರಕ್ಷಣೆಯ ನೆವದಿಂದ ಸಮರ್ಥಿಸಬಹುದು. ಯಾವುದೇ ಯುದ್ಧಕ್ಕೆ "ಸ್ವರಕ್ಷಣೆ"ಯ ನೆಪ ಹೇಳುವುದು ಎರಡು ಸಂಗತಿಗಳನ್ನು ತೋರುತ್ತದೆ. ನಾಗರೀಕ ಸಮಾಜದ ಬಹುಸಂಖ್ಯೆಯ ಜನರು ಸುಮ್ಮ ಸುಮ್ಮನೆ ಪ್ರಾಣಕೊಡಲು, ಪ್ರಾಣ ತೆಗೆಯಲು ಒಪ್ಪುವುದಿಲ್ಲ. ಇದು ಒಂದು ಸಂಗತಿ. ಇನ್ನೊಂದು ಸಂಗತಿ, ಲಕ್ಷಾಂತರ ಜನಸಮುದಾಯವನ್ನು ನಂಬಿಸುವುದು ಸುಲಭ ಎಂಬುದು. ಜನರಲ್ಲಿ ಸ್ವತಂತ್ರವಾಗಿ ಆಲೋಚಿಸುವ ಶಕ್ತಿ ಇಲ್ಲದಿರುವಾಗ ಅದರ ಮನಸ್ಸನ್ನು ವಶಪಡಿಸಿಕೊಳ್ಳುವುದು ಸುಲಭ. ಭಾವನೆಗಳ ಮಟ್ಟದಲ್ಲಿ ಬುದ್ಧಿಯ ಮಟ್ಟದಲ್ಲಿ ಜನಸಮುದಾಯವು ರಾಜಕೀಯ ನಾಯಕನನ್ನೋ, ಧಾರ್ಮಿಕ ಮುಖಂಡರನ್ನೋ, ಅವಲಂಬಿಸಿಯೇ ಬದುಕಿರುತ್ತಾರೆ ಎಂದಿಟ್ಟುಕೊಳ್ಳಿ. ಆಗ ನಾಯಕರು ಮುಖಂಡರು ಏನನ್ನು ಬೇಕಾದರೂ ಗಟ್ಟಿಯಾಗಿ ಮನವೊಲಿಸುವಂತೆ ಮತ್ತೆ ಮತ್ತೆ ಹೇಳಿ ಜನರನ್ನು ನಂಬಿಸಬಹುದು. ವ್ಯಕ್ತಿಯಂತೆಯೇ ಜನಸಮುದಾಯವೂ ವರ್ತಿಸುತ್ತದೆ. ಭಯ ಹುಟ್ಟಿಸಿದರೆ ಸಾಕು. ರಕ್ಷಣೆಗಾಗಿ ಪ್ರಾಣ ಕೊಡಲು ಪ್ರಾಣ ತೆಗೆಯಲು ಸಿದ್ಧರಾಗುತ್ತಾರೆ. ಭಯದ ಪ್ರತಿಕ್ರಿಯೆಗಾಗಿ ಹಿಂಸೆ ಹುಟ್ಟುತ್ತದೆ.

ಹಿಂಸೆ ಹತಾಶೆಗೆ ಪ್ರತಿಕ್ರಿಯೆಯಾಗಿಯೂ ಹುಟ್ಟಬಹುದು. ಪ್ರಾಣಿಗಳು, ಮಕ್ಕಳು, ದೊಡ್ಡವರು ಎಂಬ ವ್ಯತ್ಯಾಸ ಇಲ್ಲಿಲ್ಲ. ಬಯಕೆಗಳೋ, ಅಗತ್ಯಗಳೋ ಈಡೇರದೆ ಹೋದಾಗ ಹತಾಶೆ ಹುಟ್ಟುತ್ತದೆ. ಹತವಾದ ಆಸೆಯನ್ನು ಹಿಂಸೆಯ ಮೂಲಕವಾದರೂ ಈಡೇರಿಸಿಕೊಳ್ಳುವ ವಿಫಲ ಪ್ರಯತ್ನ ನಡೆಯಬಹುದು. ಹೊಟ್ಟೆಯ ಕಿಚ್ಚು ಅಸೂಯೆಗಳು ಕೂಡ ಹಿಂಸೆಯನ್ನು ಹುಟ್ಟಿಸುವ ಕಾರಣಗಳಾಗ

ಬಹುದು. ನನಗೆ ಬೇಕಾದದ್ದು, ನಾನು ಬಯಸಿದ್ದು ನನಗೆ ಸಿಗದೆ ಮತ್ತೊಬ್ಬನಿಗೆ ಸಿಕ್ಕಿದಾಗ, ನನಗೆ ಸಿಗದೆಹೋದ ಆ ವಸ್ತುವನ್ನೂ ಅದನ್ನು ಪಡೆದುಕೊಂಡ ಮತ್ತೊಬ್ಬನನ್ನೂ ದ್ವೇಷಿಸುವ, ಹಿಂಸಿಸುವ ಭಾವ ಹುಟ್ಟುತ್ತದೆ. ಅಸೂಯೆ ಕೂಡ ಹತಾಶೆಯ ಇನ್ನೊಂದು ರೂಪ.

**ಸೇಡಿನ ಹಿಂಸೆ** ಕೂಡ ಪ್ರತಿಕ್ರಿಯೆಯ ರೂಪದ್ದೇ ಆದರೂ ಇದು ರೋಗ ಲಕ್ಷಣಗಳನ್ನು ಪಡೆದಿರುವ ಹಿಂಸೆ. ಭಯಕ್ಕೆ ಪ್ರತಿಕ್ರಿಯೆಯಾಗಿ ಹುಟ್ಟುವ ಹಿಂಸೆ 'ಆಗಬಹುದಾದ' ಅಥವ 'ಬರಲಿರುವ' ಅಪಾಯದಿಂದ ಪಾರಾಗುವುದಕ್ಕೆ ಸಹಾಯ ಮಾಡಬಹುದು. ಆದ್ದರಿಂದ ಅದಕ್ಕೆ ಸ್ವಲ್ಪಮಟ್ಟಿಗೆ ಜೀವರಕ್ಷಕ ಉದ್ದೇಶವಿದೆ ಅನ್ನಬಹುದು. ಆದರೆ ಸೇಡು ಹಾಗಲ್ಲ. ಅನ್ಯಾಯ ಅಥವ ನೋವು ಆಗಲೇ 'ಆಗಿ ಹೋಗಿದೆ'. ಸೇಡು ಆಗಿಹೋದದಕ್ಕೆ ಪ್ರತಿಕ್ರಿಯೆ. ಎಷ್ಟೇ ತೀವ್ರ ಪ್ರಮಾಣದ ಹಿಂಸೆ ಕೂಡ ಆಗಿಹೋದದ್ದನ್ನು, ನಿಜವನ್ನು ಬದಲಾಯಿಸಲಾರದು. ಆಗಿ ಹೋದದ್ದನ್ನು ಬದಲಾಯಿಸುವ ಭ್ರಮೆ ಅಥವ ಅಪ್ರಾಯೋಗಿಕ ಆಸೆ ಸೇಡಿನ ಭಾವದಹಿಂದೆ ಇರುತ್ತದೆ. ವ್ಯಕ್ತಿಗಳಲ್ಲಿ, ಅ–ನಾಗರಿಕ ಸಮಾಜಗಳಲ್ಲಿ, ನಾಗರಿಕ ಗುಂಪುಗಳಲ್ಲಿ ಸೇಡು ಕಾಣಿಸಿಕೊಳ್ಳುತ್ತದೆ. ವ್ಯಕ್ತಿಯಲ್ಲೇ ಆಗಲಿ ಗುಂಪಿನಲ್ಲೇ ಆಗಲಿ ಸೃಜನಶೀಲತೆ ಕಡಮೆಯಾಗಿದಷ್ಟೂ ಸೇಡಿನ ಸಾಧ್ಯತೆ ಹೆಚ್ಚಾಗಿರುತ್ತದೆ. ಬಲಹೀನನಾದವನು, ವಿಕಲತೆಯುಳ್ಳವನು, ಸ್ವಜನ ಶಕ್ತಿ ಇಲ್ಲದವನು ತನಗಾದ ನೋವನ್ನು ಅನ್ಯಾಯವನ್ನು ಆತ್ಮಗೌರವಕ್ಕೆ ಬಿದ್ದ ಪೆಟ್ಟು ಎಂದು ತಿಳಿಯುತ್ತಾನೆ. 'ಕಣ್ಣಿಗೆ ಕಣ್ಣು, ರಕ್ತಕ್ಕೆ ರಕ್ತ' ಇದು ಮಾತ್ರ ತನ್ನ ಮುಕ್ಕಾದ ಗೌರವವನ್ನು ರಿಪೇರಿ ಮಾಡುತ್ತದೆ ಎಂದು ನಂಬುತ್ತಾನೆ. ಆದರೆ ಸ್ವಜನಶೀಲ ನಿಲುವಿನ ವ್ಯಕ್ತಿ ಆಗಿಹೋದ ಅನ್ಯಾಯ, ನೋವು, ಅಪಮಾನಗಳ ಬಗ್ಗೆ ಸೇಡಿನಿಂದ ಕುದಿಯುವುದಕ್ಕಿಂತ ಉಪಯುಕ್ತವಾಗಿ ಬದುಕುವುದು ಮಿಗಿಲಾದದ್ದು ಎಂದು ತಿಳಿಯುತ್ತಾನೆ. ಯಾರು ಪ್ರಬುದ್ಧರಲ್ಲವೋ, ಸ್ವತಂತ್ರರಲ್ಲವೋ ಅವರು ಮಾತ್ರ ಸೇಡನ್ನು ಇಡೀ ಬದುಕಿನ ಕೇಂದ್ರವಾಗಿ ಮಾಡಿಕೊಳ್ಳುತ್ತಾರೆ. ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಭಾವನೆಗಳ ಮಟ್ಟದಲ್ಲಿ ಹಿಂದುಳಿದಿರುವ ಗುಂಪುಗಳಲ್ಲಿ ಸೇಡಿನ ಭಾವ ತೀವ್ರವಾಗಿರುತ್ತದೆ. ಕೈಗಾರಿಕೆಗಳೇ ಪ್ರಧಾನವಾಗಿರುವ ಸಮಾಜದಲ್ಲಿ ಕೆಳ ಮಧ್ಯಮ ವರ್ಗ ಸದಾ ಕೊರತೆಯಿಂದ ಬಳಲುತ್ತಿರುತ್ತದೆ. ಆದ್ದರಿಂದಲೇ ಅವರು ಕುಲದ ಕಾರಣಕ್ಕೆ, ದೇಶಭಕ್ತಿಯ ಕಾರಣಕ್ಕೆ, ನಾಯಕಪೂಜೆಯ ಕಾರಣಕ್ಕೆ ಹುಟ್ಟುವ ಸೇಡಿನ ಕೇಂದ್ರಗಳಾಗಿರುತ್ತಾರೆ. ಪ್ರಾಚೀನ ಮತ್ತು ಅನಾಗರಿಕ ಸಮಾಜದಲ್ಲಿ 'ಆತ್ಮರತಿ' ಕೂಡ ಸೇಡಿನ ಕಾರಣವಾಗಿರಬಹುದು. ('ಆತ್ಮರತಿ' ಕುರಿತ ಲೇಖನ ನೋಡಿ)

**ವಿಶ್ವಾಸಭಂಗ** ಕೂಡ ಹಿಂಸೆಯ ಪ್ರತಿಕ್ರಿಯೆಗೆ ಕಾರಣವಾಗಬಹುದು. ವಿಶ್ವಾಸಭಂಗವೆನ್ನುವುದು ಸಾಮಾನ್ಯವಾಗಿ ಬಾಲ್ಯದಲ್ಲಿಯೇ ಆಗುವ ಅನುಭವ. ಮಗುವಿನ

ಬದುಕು ಸಹಜವಾಗಿ ಪ್ರೀತಿ, ಒಳ್ಳೆಯತನ ಮತ್ತು ನ್ಯಾಯದ ಭಾವಗಳಿಂದ ತುಂಬಿರುತ್ತದೆ. ಹಸಿದಾಗ ಹಾಲೂಡಿಸುವ, ಛಳಿಯಾದಾಗ ಹೊದೆಸುವ, ನೋವಾದಾಗ ಸಂತೈಸುವ 'ತಾಯಿ' ಮಗುವಿನ ವಿಶ್ವಾಸದ ಕೇಂದ್ರವಾಗಿರುತ್ತಾಳೆ. ಇದು, ತಂದೆಯೋ ಅಜ್ಜಿಯೋ ಮಗುವನ್ನು ಪೋಷಿಸುವ ಯಾರೂ ಆಗಿರಬಹುದು. ಮಗುವಿಗೆ ಈ ಪೋಷಕನ ಮೇಲೆ ಇರುವ ವಿಶ್ವಾಸ ಬೇರೆಯಲ್ಲ. ಬದುಕಿನ ಬಗ್ಗೆ ಇರುವ ವಿಶ್ವಾಸ ಬೇರೆಯಲ್ಲ. ಆದರೆ ತುಂಬ ಎಳವೆಯಲ್ಲೇ ವಿಶ್ವಾಸಕ್ಕೆ ಧಕ್ಕೆಯಾಗುತ್ತದೆ. ಮುಖ್ಯವಾದ ವಿಷಯದಲ್ಲಿ ಸುಳ್ಳು ಹೇಳುವ ತಾಯಿ : ತಾಯಿಗೆ ಹೆದರುವ ತಂದೆ ; ತನ್ನ ಹಿತಕ್ಕೆಂದು ಮಗುವಿಗೆ ಮೋಸಮಾಡುವ ತಂದೆ ; ಮಗುವಿಗೆ ಅಕಸ್ಮಾತಾಗಿ ಕಾಣುವ ತಂದೆತಾಯಿಯರ ಲೈಂಗಿಕ ಕೂಟ ಮತ್ತು ಅದರಿಂದ ಮಗುವಿನಲ್ಲಿ ತಂದೆಯೊಂದು 'ಪ್ರಾಣಿ' ಎಂಬ ಭಾವ ; ತನಗೆ ಭಯವೋ ಬೇಸರವೋ ಆಗಿದ್ದಾಗ ಗಮನಿಸದೆಯೇ ಇರುವ ತಂದೆ-ತಾಯಿ ಇಂಥ ನೂರಾರು ವಿವರಗಳಲ್ಲಿ ಮಗುವಿಗೆ ಪೋಷಕರ ಬಗ್ಗೆ ಇರುವ ವಿಶ್ವಾಸ ಮುಕ್ಕಾಗುತ್ತದೆ. ಪೋಷಕರ ಪ್ರೀತಿ, ವಿಶ್ವಾಸ, ಸತ್ಯವಂತಿಕೆ, ಇಂಥಗುಣಗಳ ಬಗ್ಗೆ ನಂಬಿಕೆ ಕರಗುತ್ತದೆ. ಧಾರ್ಮಿಕ ವಾತಾವರಣದಲ್ಲಿ ಬೆಳೆದ ಮಗುವಾದರೆ ಮನುಷ್ಯರ ಬಗ್ಗೆ ವಿಶ್ವಾಸ ಹೋದಂತೆ ದೇವರ ಬಗ್ಗೆಯೂ ವಿಶ್ವಾಸ ಹೋಗಿಬಿಡುತ್ತದೆ. ಪ್ರೀತಿಯ ಗುಬ್ಬಚ್ಚಿ, ನಾಯಿಮರಿ, ಪುಟ್ಟ ಶಮ್ಮ, ತಂಗಿ ಸತ್ತರೆ ದೇವರು ಒಳ್ಳೆಯವನಲ್ಲ ದೇವರು ಮೋಸ ಮಾಡುತ್ತಾನೆ. ಹೀಗೆಲ್ಲ ಮಗು ಅಂದುಕೊಳ್ಳಬಹುದು. ದೇವರ ಬಗ್ಗೆಯೋ ಮನುಷ್ಯರಬಗ್ಗೆಯೋ ವಿಶ್ವಾಸ ಯಾರಬಗ್ಗೆ ಕಳೆಯಿತು ಎಂಬುದು ಮುಖ್ಯವಲ್ಲ. ಬದುಕಿನಲ್ಲಿ ಇರುವ ವಿಶ್ವಾಸ, ಬದುಕನ್ನು ನಂಬುವ ಒಪ್ಪುವ ಸಾಧ್ಯತೆಯೇ ಇದರೊಡನೆ ಮುರಿದುಹೋಗುತ್ತದಲ್ಲ ಅದು ಮುಖ್ಯ. ಭ್ರಮೆಗಳನ್ನು ಒಂದೊಂದಾಗಿ ಕಳೆದುಕೊಳ್ಳುತ್ತ ಮಗು ಬೆಳೆಯುತ್ತದೆ ಎಂಬುದು ನಿಜ. ಆದರೆ ವಿಶ್ವಾಸಭಂಗದ ತೀವ್ರತೆ ಮುಖ್ಯವಾದ ಸಂಗತಿಯಾಗುತ್ತದೆ. ಕೇವಲ ಒಂದು ಘಟನೆಯಿಂದ ವ್ಯಕ್ತಿಯ ವಿಶ್ವಾಸ ಬದುಕಿನ ನಂಬಿಕೆ ಕಳೆದುಹೋಗುವುದಿಲ್ಲ. ವಿಶ್ವಾಸಭಂಗಕ್ಕೆ ಕಾರಣವಾಗುವಂಥ ನೂರಾರು ಸಣ್ಣ ಘಟನೆಗಳು, ಅನುಭವಗಳು ಎಲ್ಲ ಸೇರುತ್ತ ಸೇರುತ್ತ ಒಮ್ಮೆ ಬಲವಾಗಿ ವ್ಯಕ್ತಿಯನ್ನು, ವ್ಯಕ್ತಿತ್ವವನ್ನ ಆಘಾತಿಸಬಹುದು. ನಮಗೆ ಮೊಟ್ಟಮೊದಲ ವಿಶ್ವಾಸಭಂಗದಅನುಭವ ನಾಲ್ಕನೆಯ ವಯಸ್ಸಿಗೂ ಮೊದಲೇ ಆಗಿರಬಹುದು. ಅದರ ನೆನಪು ಉಳಿದಿರಲಾರದು. ಆದರೆ ಮುಂದೊಂದು ದಿನ ನಮ್ಮ ಪ್ರಿಯನೂ, ಮೆಚ್ಚಿದ ಮೇಷ್ಟರೋ, ವಿಶ್ವಾಸ ಭಕ್ತಿಯಿಂದ ಪ್ರಜ್ಞೆ ಸಲ್ಲಿಸುತ್ತಿದ್ದ ಗುರುವೋ, ಅಥವ ರಾಜಕೀಯ ಮುಖಂಡನೋ ಕೊನೆಯ, ಮುಖ್ಯವಾದ, ತೀವ್ರವಾದ ವಿಶ್ವಾಸಭಂಗಕ್ಕೆ ಕಾರಣವಾಗಬಹುದು.

ವಿಶ್ವಾಸಭಂಗಕ್ಕೆ ನಾವು ಅನೇಕ ರೀತಿಯ ಪ್ರತಿಕ್ರಿಯೆಗಳನ್ನು ತೋರುತ್ತೇವೆ. ನಮ್ಮ ವಿಶ್ವಾಸಭಂಗಕ್ಕೆ ಕಾರಣವಾದ ವ್ಯಕ್ತಿಯ ಮೇಲೆ ಅವಲಂಬಿತವಾಗಿರುವುದನ್ನು

ಬಿಟ್ಟು ಸ್ವತಂತ್ರವಾಗಲು ತೊಡಗಬಹುದು : ವಿಶ್ವಾಸಪಾತ್ರರಾಗಬಲ್ಲ ಇತರ ವ್ಯಕ್ತಿಗಳನ್ನು ಹುಡುಕತೊಡಗಬಹುದು ; ವಿಶ್ವಾಸಭಂಗದಿಂದಾಗಿಯೇ ವ್ಯಕ್ತಿತ್ವದ ನಿಜವಾದ ಬೆಳವಣಿಗೆ ತೊಡಗಲೂಬಹುದು. ಹೀಗಾದರೆ ಒಳ್ಳೆಯದೇ. ಆದರೆ ಸಾಮಾನ್ಯವಾಗಿ ವಿಶ್ವಾಶಭಂಗ ಎಲ್ಲರ ಮೇಲೆ ಅನುಮಾನ ಹುಟ್ಟಿಸುತ್ತದೆ. ಜೊತೆಯವರನ್ನು ಪ್ರೀತಿಸುವುದಕ್ಕಿಂತ ಪರೀಕ್ಷಿಸುವ ಸ್ವಭಾವ ಬೆಳೆಯುತ್ತದೆ. ಬದುಕಿನಲ್ಲಿ ವಿಶ್ವಾಸ ಕುದುರಿಸಬಲ್ಲ ಪವಾಡ ನಡೆಯಲೆಂದು ಹಾರೈಸುತ್ತಾ ಅದಕ್ಕಾಗಿ ಕಾಯುವುದಾಗುತ್ತದೆ. ಬದುಕಿನಲ್ಲಿ ಮತ್ತೆ ನಂಬಿಕೆ ಮಾಡಲೆಂದು ಹಿರಿಯ ಶಕ್ತಿಯೊಂದಕ್ಕೆ ಮೊರೆಹೋಗಬೇಕೆನಿಸುತ್ತದೆ. ಆ ಹಿರಿಯ ಶಕ್ತಿ ದೇವರಾಗಿರಬಹುದು, ಮಠ ಆಗಿರಬಹುದು, ರಾಜಕೀಯ ಪಕ್ಷ ಆಗಿರಬಹುದು, ಕೊನೆಗೆ ಸಿನಿಮಾ ನಾಯಕನೂ ಆಗಿರಬಹುದು. ಇನ್ನು ಕೆಲವು ಬಾರಿ ಇದೇ ವಿಶ್ವಾಸಭಂಗವು ನಮ್ಮನ್ನು ಹಣ, ಅಧಿಕಾರ, ಗೌರವಗಳ ಬೇಟೆಯಲ್ಲಿ ತೊಡಗಿಸಬಹುದು. ಇವುಗಳನ್ನೆಲ್ಲ ಗಳಿಸುವ ಮೂಲಕ ಬದುಕಿನಲ್ಲಿ ಅರ್ಥಕಾಣುವ ತವಕಹುಟ್ಟಬಹುದು. ಕೊನೆಯದಾಗಿ, ವಿಶ್ವಾಸಭಂಗವು ಬದುಕಿನ ಬಗ್ಗೆಯೇ ದ್ವೇಷಹುಟ್ಟಿಸಬಹುದು. ಯಾರನ್ನೂ ನಂಬುವಂತಿಲ್ಲ. ಇಲ್ಲಿ ಪ್ರೀತಿ ಇಲ್ಲ. ನ್ಯಾಯ ಇಲ್ಲ. ದೇವರಿಲ್ಲ. ಇಂಥ ಭಾವನೆಗಳು ಹುಟ್ಟಿ ವ್ಯಕ್ತಿಯ ಇಡೀ ಬದುಕು, ತನಗೊಬ್ಬನಿಗಾದ ನಿರಾಸೆಯಿಂದ ನೋವಿನಿಂದ, ಎಲ್ಲೆಲ್ಲೂ ಕೆಡಕನ್ನು ಕಾಣುವ ಬದುಕಾಗುತ್ತದೆ. ವಿಶ್ವಾಸಭಂಗವು ಬದುಕಿನ ದ್ವೇಷವಾಗಿ ಮಾರ್ಪಡುತ್ತದೆ, ದ್ವೇಷಕ್ಕೆ ಅರ್ಹವಾದ ಈ ಬದುಕನ್ನು ನಾಶ ಮಾಡಬೇಕೆಂಬ ಹಂಬಲ ಹುಟ್ಟಿಸುತ್ತದೆ. ಹಿಂಸೆಯು ರೂಪ ತಾಳುತ್ತದೆ. ಇವೆಲ್ಲ ವ್ಯಕ್ತಿಯ ಬದುಕಿನಲ್ಲಿ ಹೇಗೋ ಸಾಮಾಜಿಕ ಬದುಕಿನಲ್ಲಿ ಹಾಗೇ ನಿಜ. ಜನನಾಯಕ ಮಾಡುವ ವಿಶ್ವಾಸಭಂಗ, ಹಿಂಬಾಲಕರ ಸ್ವಾತಂತ್ರ್ಯಕ್ಕೆ ಕಾರಣವಾಗುವ ಬದಲು ಅವರಲ್ಲಿ ಸಿನಿಕತೆಯನ್ನು ವಿನಾಶಕಾರಿ ಚಟುವಟಿಕೆಗಳನ್ನು ಬೆಳೆಸುವುದು ಕಾಣುತ್ತದೆ.

ಈ ಎಲ್ಲಬಗೆಯ ಹಿಂಸೆಗಳಿಗಿಂತ ಹೆಚ್ಚು ರೋಗಗ್ರಸ್ತವಾದಹಿಂಸೆ ಎಂದರೆ ಪರಿಹಾರ ರೂಪದ ಹಿಂಸೆ. ಕೆಲವರು ಇರುತ್ತಾರೆ, ಏನನ್ನೂ ಸೃಷ್ಟಿಸುವ ಶಕ್ತಿಯಿಲ್ಲದ "ಪೌರುಷ" ಹೀನರು. ಇಂಥ ಬಲಹೀನರು ತಮಗೆ ಇಲ್ಲದ ಸೃಷ್ಟಿಸಾಮರ್ಥ್ಯಕ್ಕೆ ಪರಿಹಾರವೋ ಎಂಬಂತೆ ಹಿಂಸೆಯನ್ನು ಆಯ್ದುಕೊಳ್ಳುತ್ತಾರೆ. ಇಲ್ಲಿ "ಪೌರುಷ" ಅಂದರೇನೆಂದು ಸ್ಪಷ್ಟಮಾಡಿಕೊಳ್ಳೋಣ. ವ್ಯಕ್ತಿಯು ಪ್ರಕೃತಿಯ ನಿಯಮಗಳಿಗೆ ಮತ್ತು ಸಮಾಜದ ಶಕ್ತಿಗಳಿಗೆ ಅಧೀನನಾದವನು ಎಂಬುದು ನಿಜ. ಬದುಕು ವ್ಯಕ್ತಿಯನ್ನು ತಿದ್ದುತ್ತದೆ. ಆದರೆ ಮನುಷ್ಯನಿಗೆ ಆಯ್ಕೆಯ ಸ್ವಾತಂತ್ರ್ಯವೂ, ಸಾಮರ್ಥ್ಯವೂ ಇದೆ, ಇಚ್ಛಾಶಕ್ತಿ ಎಂಬುದೂ ಇದೆ. ಮನುಷ್ಯ, ತನಗಿರುವ ಮಿತಿಗಳೊಳಗೆ, ತನ್ನನ್ನು ತಿದ್ದುವ ಬದುಕನ್ನು ಸ್ವಲ್ಪಮಟ್ಟಿಗಾದರೂ ತಾನು ತಿದ್ದಲು ಬದಲಾಯಿಸಲು ಬಯಸುತ್ತಾನೆ. ಯಾಕೆಂದರೆ ಮನುಷ್ಯ "ಸುಮ್ಮನೆ" ಇರಲಾರ, ಬದುಕನ್ನು ತಿದ್ದುವ ಈ ಮನುಷ್ಯನ ಆಸೆ ತುಂಬ

ಹಿಂದಿನ ಗುಹಾ ಚಿತ್ರಗಳಿಂದ ಹಿಡಿದು, ಕಲೆ ಸಾಹಿತ್ಯ ಸಂಗೀತಗಳಲ್ಲಿ, ದಿನದಿನದ ಕೆಲಸಗಳಲ್ಲಿ ಲೈಂಗಿಕಕ್ರಿಯೆಯಲ್ಲಿ ಕಾಣಿಸಿಕೊಳ್ಳುತ್ತ ಬಂದಿದೆ. ಈ ಎಲ್ಲ ಕ್ರಿಯೆಗಳೂ ವ್ಯಕ್ತಿತನಗೊಂದು ಗುರಿ ಇಟ್ಟುಕೊಂಡು ಅದನ್ನು ಸಾಧಿಸುವ ಹಟದಲ್ಲಿ, ಪೌರುಷದಲ್ಲಿ ಹುಟ್ಟಿದಂಥವು. ಈ ಸೃಷ್ಟಿಯ ಹಟವೇ ಪೌರುಷ. ದುರ್ಬಲತೆ, ಕಳವಳ, ಇಂಥ ಯಾವುದೇ ಕಾರಣದಿಂದ ವ್ಯಕ್ತಿಯು ಕ್ರಿಯೆಯಲ್ಲಿ ತೊಡಗಲು ಅ-ಸಮರ್ಥನಾದರ ಆಗ ಪೌರುಷಹೀನನಾಗಿ ನರಳುತ್ತಾನೆ. ಇದು ಬದುಕಿನ ಸಮತೋಲನವನ್ನು ಕೆಡಿಸುತ್ತದೆ, ಆದರೆ ಮನುಷ್ಯ ಸುಮ್ಮನೆ ಇರಲಾರ. ಏನೂ ಮಾಡಲು ಆಗದ ವ್ಯಕ್ತಿ ಏನನ್ನಾದರೂ ಮಾಡಬಲ್ಲ ಪೌರುಷವಂತನೊಬ್ಬನೊಡನೆ ಅಥವ ಪೌರುಷವಂತ ಗುಂಪಿನೊಡನೆ ತನ್ನನ್ನು ಪೂರ್ಣವಾಗಿ ಗುರುತಿಸಿಕೊಂಡು ಪೌರುಷದ ಕ್ರಿಯೆಯಲ್ಲಿ ತಾನೂ ಭಾಗಿಯಾದ ಭ್ರಮೆಯ ಸಮಾಧಾನ ಹೊಂದಬಹುದು. ಅಥವ ಹಿಂಸೆಯದಾರಿಹಿಡಿಯಬಹುದು, ಯಾಕೆ ಗೊತ್ತೆ ? ಸೃಷ್ಟಿಸುವುದೆಂದರೆ ತನಗಿರುವ ಮಿತಿಗಳನ್ನು ಮೀರುವ ಪ್ರಯತ್ನ. ವಿನಾಶ ಮಾಡುವುದು ಕೂಡ ಅಂಥದೇ ಯತ್ನ. ಏನೂಮಾಡದೆ ಸುಮ್ಮನೆ ಇರಲು ಸಾಧ್ಯವಿಲ್ಲ. ಸೃಷ್ಟಿಸುವುದಕ್ಕೆ ಬೇಕಾದ ಗುಣಗಳಿಲ್ಲ, ವಿನಾಶಕ್ಕೆ "ಬಲ" ಮಾತ್ರ ಸಾಕು. ಸೃಷ್ಟಿಸುವ ಪೌರುಷವಿಲ್ಲದ ಆದರೆ "ಬಲ"ವಿರುವ ವ್ಯಕ್ತಿ ತನ್ನ ತೋಳಿನ ಬಲದಿಂದಲೋ, ಅಥವ ಪಿಸ್ತೂಲು ಚೂರಿಗಳೊಂದಿಗೋ ಇನ್ನೊಬ್ಬನನ್ನು ಹಿಂಸಿಸಿ ಕೊಂದು ಅಥವ ತನ್ನನ್ನೇ ಕೊಂದುಕೊಂಡು ಬದುಕಿನ ಮಿತಿಮೀರಲು ಬಯಸುತ್ತಾನೆ. ಪರಿಹಾರ ರೂಪದ ಹಿಂಸೆಯೆಂದರೆ ಇದೇ. ಸೃಷ್ಟಿಸುವ ಸಾಮರ್ಥ್ಯವಿಲ್ಲದ್ದಕ್ಕೆ ಪರಿಹಾರ ರೂಪವಾಗಿ ಕಂಡುಕೊಂಡ ಹಿಂಸೆಯ ದಾರಿ. ಸೃಷ್ಟಿಸಲಾಗದವ ವಿನಾಶಮಾಡುತ್ತಾನೆ. ಹಿಂಸೆಯ ಮೂಲಕ ತನ್ನ ವ್ಯಕ್ತಿತ್ವವನ್ನು ಸ್ಥಾಪಿಸಲು ಬಯಸುತ್ತಾನೆ, (ಕಾಲಿಗುಲ, ತೊಗಲಕ್ ಇಂಥವರಲ್ಲವೇ ? ಅಡಿಗರ "ಏನಾದರೂ ಮಾಡುತಿರು ತಮ್ಮ" ಕವನದ ಆರಂಭದ ಸಾಲು ಇಂಥ ಹಿಂಸೆಯ ವಿವರಣೆ ಅಲ್ಲವೆ ?)

ಪರಿಹಾರ ರೂಪದ ಹಿಂಸೆಗೆ ಅತಿ ಹತ್ತಿರದ ಸಂಬಂಧವಿರುವಂಥದ್ದು ಹಿಂಸಾರತಿ (ಸ್ಯಾಡಿಸಂ). ಮತ್ತೊಂದು ಜೀವಿಯಮೇಲೆ ಸಂಪೂರ್ಣ ಅಧಿಕಾರ ಹೊಂದುವ ಆಸೆ ಹಿಂಸಾರತಿಯ ಮೂಲದಲ್ಲಿ ಕಾಣುತ್ತದೆ. ಮತ್ತೊಂದು ಜೀವಿ, ಅಸಹಾಯಕನಾಗಿ ಸಂಪೂರ್ಣವಾಗಿ ನನ್ನ ಅಧೀನವಾಗಬೇಕು. ನಾನು ಜೀವಿಸಿ ದೇವರಾಗಬೇಕು. ನನಗೆ ಇಷ್ಟಬಂದಂತೆ ಆ ಜೀವಿಯೊಡನೆ ನಡೆದುಕೊಳ್ಳಬೇಕು. ಹಾಗೆ ಮಾಡಲು ಇರುವ ಒಂದು ಉಪಾಯವೆಂದರೆ ಆ ಜೀವಿಯನ್ನು ದೀನನನ್ನಾಗಿಸಬೇಕು. ಹಾಗಾಗಿ ದೈಹಿಕ ಬಲದಿಂದ ನಾನು ಕೊಡುವ ಹಿಂಸೆ, ನೋವು, ಯಾತನೆಗಳು ಆ ಜೀವಿಗೆ ಯಾವುದೇ ರಕ್ಷಣೆ ಇಲ್ಲದಂತೆ ಮಾಡಿ ನನಗೆ ಅಧೀನಗೊಳಿಸಿಕೊಳ್ಳುವ ಉಪಾಯವಾಗುತ್ತದೆ. ಇನ್ನೊಬ್ಬ ವ್ಯಕ್ತಿಯನ್ನು ಅಧೀನಗೊಳಿಸಿಕೊಳ್ಳುವ ಕ್ರಿಯೆ, ಲೈಂಗಿಕ ವರ್ತನೆಯಲ್ಲಿ ಹಿಂಸಾರತಿಯಾಗುತ್ತದೆ. ವ್ಯಕ್ತಿಗಳಲ್ಲಿ, ಜನರಗುಂಪುಗಳಲ್ಲಿ ಹಿಂಸಾರತಿ, ವಿನಾಶದ ಆಸೆ

ಎಷ್ಟು ತೀವ್ರವಾಗಿ ಎಷ್ಟೊಂದು ಸಂದರ್ಭಗಳಲ್ಲಿ ಕಾಣುತ್ತದೆ ಎಂದರೆ ಅದನ್ನು ಆಕಸ್ಮಿಕವೆಂದೋ, ದುರಭ್ಯಾಸವೆಂದೋ ಮರೆತುಬಿಡಲು ಸಾಧ್ಯವಿಲ್ಲ. ಹಿಂಸೆಯ ಆಸೆ ಬದುಕುವ ಆಸೆಯಷ್ಟೇ ತೀವ್ರವಾದದ್ದು, ಬಲವಾದದ್ದು. ಯಾಕೆಂದರೆ ಹಿಂಸೆಕೂಡ ಅಸಹಾಯಕತೆಯನ್ನು ಮೀರುವ ಪ್ರಯತ್ನದ ಒಂದುರೂಪ. ಮನುಷ್ಯ ಮನುಷ್ಯ ನಾಗಿರುವುದರಿಂದಲೇ ಸೃಷ್ಟಿಸಲಾಗದಿದ್ದರೆ ವಿನಾಶಮಾಡಲು ಬಯಸುತ್ತಾನೆ. ಈ ಪರಿಹಾರರೂಪದ ಹಿಂಸೆಯನ್ನು ಶಿಕ್ಷೆಯ ಭಯದಿಂದ ಅದುಮಿಡಬಹುದು ಅಥವ ಕ್ರೀಡೆ ಮನರಂಜನೆಗಳ ರೂಪದಲ್ಲಿ ಹೊರಹೊಮ್ಮಲು ದಾರಿಮಾಡಿಕೊಡಬಹುದು. ಆದರೆ ಪರಿಹಾರರೂಪದ ಹಿಂಸೆಗೆ ನಿಜವಾದ ನಿವಾರಣೆಯ ಉಪಾಯವೆಂದರೆ ವ್ಯಕ್ತಿಯ ಸೃಷ್ಟಿಸಾಮರ್ಥ್ಯಕ್ಕೆ ಪೂರ್ಣ ಅವಕಾಶ ದೊರಕಿಸಿಕೊಡುವುದು ಮಾತ್ರ. ಯಾಕೆಂದರೆ ಮನುಷ್ಯ "ಪೌರುಷ" ಹೀನನಾದಾಗ ಹಿಂಸೆಯ ದಾರಿಯನ್ನು ಆಯ್ದುಕೊಳ್ಳುತ್ತಾನೆ.

ಹಿಂಸೆಯ ಇನ್ನೊಂದು ರೂಪ ಕೊನೆಯದು, ತುಂಬಹಳೆಯ ಕಾಲದಿಂದ ಮನುಷ್ಯ ನಲ್ಲಿ ಉಳಿದಿರುವ ರಕ್ತದಾಹ. ಇಂಥ ಒಬ್ಬ ಮನುಷ್ಯನನ್ನು ಕಲ್ಪಿಸಿಕೊಳ್ಳಿ : ಪ್ರಕೃತಿ ಯೊಡನೆ ಇನ್ನೂ ಸಂಬಂಧ ಕಡಿದುಕೊಂಡಿಲ್ಲ. ವ್ಯಕ್ತಿತ್ವ ಎಂಬುದೂ ಬೆಳವಣಿಗೆಯ ಒಂದು ಸ್ಥಿತಿ. ತನ್ನ ವ್ಯಕ್ತಿತ್ವ ರೂಪುಗೊಂಡಿದ್ದಕ್ಕೂ ಹಿಂದಿನ ಸ್ಥಿತಿಗೆ, "ವ್ಯಕ್ತಿತ್ವ ಪೂರ್ವ" ಸ್ಥಿತಿಗೆ ಹಿಂದಿರುಗುವ ಬಯಕೆ ಇದೆ. (ವಿವರಗಳಿಗೆ, "ಮನುಷ್ಯ ಸ್ವಭಾವ ಮತ್ತು ವ್ಯಕ್ತಿತ್ವ" ಲೇಖನ ನೋಡಿ) ಇಂಥ ಮನುಷ್ಯನಿಗೆ ಚಿಂತನೆಯ ಕೆಲಸ ಹೊರೆ ಎನಿಸುತ್ತದೆ. ಬುದ್ಧಿ ಭಾರ ಅನ್ನಿಸುತ್ತದೆ. ಜವಾಬ್ದಾರಿ ಬೇಡ ಅನ್ನಿಸುತ್ತದೆ. ಪ್ರಾಣಿಗಳಂತೆ ಪ್ರಕೃತಿಯೊಡನೆ ಬದುಕಲು ಆಸೆ ಇರುತ್ತದೆ. 'ರಕ್ತ'ವು ಬದುಕಿನ ಬಹಳ ಮುಖ್ಯ ಸಂಗತಿಯಾಗುತ್ತದೆ. ರಕ್ತಹರಿಸುವ ಶಕ್ತಿ ಇದೆಯೆಂದರೆ ನಾನು ಬದುಕಿದ್ದೇನೆ ಎಂಬುದಕ್ಕೆ ಅದುಸಾಕ್ಷಿ; ನಾನು ಶಕ್ತಿವಂತನಾಗಿದ್ದೇನೆ, ವಿಶಿಷ್ಟನಾಗಿದ್ದೇನೆ, ಇತರ ಜೀವಿ ಗಳಿಗಿಂತ ಮಿಗಿಲಾಗಿದ್ದೇನೆ ಎಂಬುದಕ್ಕೆ ಪುರಾವೆಯಾಗುತ್ತದೆ. ಪ್ರಾಚೀನ ಮನುಷ್ಯನ ಬದುಕಿನ ಸಮತೋಲನ ಇದ್ದದ್ದೇ ಹಾಗೆ. ಕೊಲ್ಲಬೇಕು ಇಲ್ಲವೆ ಕೊಲೆಯಾಗಬೇಕು. ಈ ಪ್ರಾಚೀನ ರಕ್ತದಾಹವು ಭಾವುಕ ಕಲ್ಪನೆಗಳಲ್ಲಿ, ಕನಸುಗಳಲ್ಲಿ, ಮನೋರೋಗಗಳಲ್ಲಿ, ಕೊಲೆಗಳಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಯುದ್ಧ ಅಥವ ಗಲಭೆಯ ಸಂದರ್ಭಗಳಲ್ಲಿ, ಸಾಮಾನ್ಯ ಸಾಮಾಜಿಕ ನಿಯಮಗಳು ನಿಲ್ಲದಿರುವ ಸ್ಥಿತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಕೊಲ್ಲು ಅಥವ ಕೊಲೆಯಾಗು ಎಂಬ ಈ ಪ್ರಾಚೀನ ಸತ್ಯ ಇವತ್ತಿನ ನರಬಲಿ, ಪ್ರಾಣಿಬಲಿಗಳಲ್ಲಿ ವ್ಯಕ್ತವಾಗುತ್ತದೆ. ರಕ್ತದಾಹವು ಸಾವಿನ ಪ್ರೀತಿಯಲ್ಲ. ('ಬದುಕಿನ ಪ್ರೀತಿ ಸಾವಿನ ಪ್ರೀತಿ' ಲೇಖನವನ್ನು ನೋಡಿ) ರಕ್ತದಾಹ ಮನುಷ್ಯನ ಪ್ರಾಚೀನ ಸ್ಥಿತಿಯ ಸೂಚಕ. ಮನುಷ್ಯನಿಗೆ ಮನುಷ್ಯಜನ್ಮ ಪ್ರಾಪ್ತವಾಗುವ ಮೊದಲು ಅವನಿಗೂ ಪ್ರಕೃತಿಗೂ ಇದ್ದ ಸಂಬಂಧದಲ್ಲಿ ರಕ್ತ ಮುಖ್ಯವಾಗಿತ್ತು. ರಕ್ತ ಬದುಕಿನ ಮೂಲ ಸತ್ವವಾಗಿತ್ತು. ರಕ್ತ ಹರಿದರೆ ಭೂಮಿ ಸಮೃದ್ಧವಾಗುತ್ತದೆ ಎಂದು ಪ್ರಾಚೀನ ಮನುಷ್ಯ ನಂಬಿದ್ದ. ರಕ್ತ

ವೀರ್ಯವಾಗಿ, ಭೂಮಿ ಹೆಣ್ಣಾಗಿ. ಹೆಣ್ಣು ಗಂಡಿನ ಆಸಕ್ತಿಯು ಕೇಂದ್ರವಾಗಿದ್ದು ಮನುಷ್ಯತ್ವದ ಬೆಳವಣಿಗೆಯ ಕತೆಯೂ ಹೌದು. ಹರಿವ ರಕ್ತ ಬದುಕನ್ನ ಕೊನೆಗೊಳಿಸುತ್ತದೆ. ವೀರ್ಯ ಹೊಸ ಬದುಕನ್ನು ಹುಟ್ಟಿಸುತ್ತದೆ. ರಕ್ತಪಿಪಾಸುಗಳಾದವರು, ಕ್ರೂರಿಗಳು ಬದುಕಿನ ಪ್ರೀತಿಯ ಸಂಕೇತಗಳಾದ ಸಂತರಾಗಿ ಪರಿವರ್ತನೆಗೊಂಡ ಕತೆಗಳು ಎಷ್ಟೊಂದಿಲ್ಲ! ಕೊಲೆಗಾರ ಪ್ರಿಯಕರನಾಗಿ ಬದಲಾಗುವುದೆಂದರೆ ಪ್ರಕೃತಿಯ ಬಂಧನವನ್ನು ಕಡಿದುಕೊಂಡು "ಸ್ವತಂತ್ರ"ನಾಗುವುದು. ಮನುಷ್ಯ ಸ್ವತಂತ್ರನಾಗದಿದ್ದರೆ ಮನುಷ್ಯತ್ವ ಬೆಳೆದ ಸ್ಥಿತಿಯಲ್ಲೂ ಮತ್ತೆ ಪ್ರಾಚೀನಕ್ಕೆ ಹಿಂದಿರುಗುವ ಆಸೆಹುಟ್ಟಿ ಮಾನಸಿಕವಾಗಿ ಹಿನ್ನಡೆದರೆ ರೋಗವಾಗುತ್ತದೆ, ಹಿಂಸೆಯ ಕಾರಣವಾಗುತ್ತದೆ, ಸಾವಿನ ಪ್ರೀತಿಯಾಗುತ್ತದೆ.

"ಹಾರ್ಟ್ ಆಫ್ ಮ್ಯಾನ್" ಪುಸ್ತಕದಿಂದ.

## ಕೋರಿಕೆ

ಕೊನೆಯಾಗದಿರಲಿ ಎಂದು
ಅಯ್ಯೋ ರಾತ್ರಿ ಕಾತರಿಸಿದ
ಪರಿಣಾಮ ಎಂಬಂತೆ
ಅಪೂರ್ಣವಾಗೇ ಉಳಿದ
ಕನಸುಗಳೇ
ನಿಮ್ಮಲ್ಲೊಂದು ಕೋರಿಕೆ
ಸಧ್ಯ
ನಾವು ಬದಲಾಗುವುದು
ಅನಿವಾರ್ಯ
ದಯವಿಟ್ಟು
ನಮ್ಮಿಂದ ದೂರಾಗಿ
ಗಾಳಿಯೇರಿ
ಸಮುದ್ರ ಹಾರಿ
ಇಂಚರ
ತೇಲುವ ಮೋಡ
ಮಗು ನಗುವಿನೊಡನೆ
ಒಂದಾಗಿ
ಕೊನೆಗೊಂದು ಮಾತು
ನಾವೇ ಕಾತರಿಸಿ
ನಿಮ್ಮಲ್ಲಿಗೆ ಬರುತ್ತೇವೆ
ನಿಮ್ಮೊಡನೆ ಬೆರೆಯುತ್ತೇವೆ
ನೀವಿಲ್ಲದ
ನನ್ನ ಬದುಕೆಲ್ಲಿಯದು ?
ಈಗ
ನೀವು ದೂರಾಗಲೇ ಬೇಕು
ಮತ್ತೆ ಬೆರೆಯುವ ತನಕ
ನಿಮಗಿದೋ ವಿದಾಯ.

— ಅರುಣ

ಅರುಣ ಕೆ.ಎನ್. ಯೂನಿವರ್ಸ್, ನಂ 13/85, ಜೆ.ಪಿ. ರಸ್ತೆ, ಬೆಂಗಳೂರು-560002

# ವಾಲೆಸ್ ಸ್ಟೀವನ್ಸ್‌ನ ಹತ್ತು ಕವಿತೆಗಳು

— ಕೆ. ವಿ. ತಿರುಮಲೇಶ್

## ೧. ಐಸ್‌ಕ್ರೀಮ್ ರಾಜ

ಬೃಹತ್ ಸಿಗಾರುಗಳ ಹೊಸೆವವನ ಕರೆ,
ಮಾಂಸಪೇಶಿಗಳವನ, ಕಡೆಯ ಹಚ್ಚುವನ
ಅಡುಗೆ ಪಾತ್ರೆಗಳಲ್ಲಿ ಕಾಮೋದ್ರೇಕ ಮೊಸರುಗಳ.
ಮದಾಲಸೆಯರಾಗಿರಲಿ ಹುಡುಗೆಯರು ಅವರವರ
ನಿತ್ಯದುಡುಗೆಯರು, ಹುಡುಗರು ತರಲಿ
ಕಳೆದ ತಿಂಗಳ ಪತ್ರಿಕೆಗಳಲಿ ಹೂವುಗಳ.
ಇರಲಿ ಇರು ತೋರಿಕೆಯ ಕೊನೆಯಾಗಿ ಸಹಜ
ರಾಜನೆಂದರೆ ರಾಜ ಐಸ್ ಕ್ರೀಮ್ ರಾಜ.

---

ವಾಲೆಸ್ ಸ್ಟೀವನ್ಸ್ (1879-1955) ಈ ಶತಮಾನದ ಒಬ್ಬ ಶ್ರೇಷ್ಠ ಕವಿ. ಜೀವನದ ಬಹುಭಾಗವನ್ನು ಕನೆಕ್ಟಿಕಟ್ ಪ್ರಾಂತದ ಹಾರ್ಟ್‌ಫೋರ್ಡ್ ಎಂಬಲ್ಲಿ ಒಂದು ಇನ್ಶೂರೆನ್ಸ್ ಕಂಪನಿಯಲ್ಲಿ ಕಳೆದ ಸ್ಟೀವನ್ಸ್ ಕವಿಯಾಗಿ ಹೆಸರುಗಳಿಸಿದ್ದು ತುಸು ತಡವಾಗಿಯೇ. ಮೊದಲ ಕವನ ಸಂಕಲನ 'ಹಾರ್ಮೋನಿಯಂ' ಪ್ರಕಟವಾದಾಗ ಅವನಿಗೆ 40 ವರ್ಷ ದಾಟಿತ್ತು. ಸ್ಟೀವನ್ಸ್‌ಗೆ ಪುರಸ್ಕಾರಗಳು ದೊರೆತುದೂ ಬಹಳ ತಡವಾಗಿಯೇ. ಸರಿ. ಕಲ್ಪನೆ ಮತ್ತು ವಾಸ್ತವಿಕಗಳ ನಡುವಿನ ಸಂಬಂಧವನ್ನು ಹುಡುಕುವ ಅವನ ಕವಿತೆಗಳು ಭಾಷಾ ದೃಷ್ಟಿಯಿಂದ ಕ್ಲಿಷ್ಟವೂ ನಿಗೂಢವೂ ಆಗಿವೆ. ಈ ತಡೆಗಳನ್ನು ದಾಟಬಲ್ಲವರಿಗೆ ಸ್ಟೀವನ್ಸ್‌ನ ಸಾಧನೆ ಅಸಾಮಾನ್ಯವಾಗಿ ತೋರುತ್ತದೆ. "ಐಸ್ ಕ್ರೀಮ್ ರಾಜ" ಹಾಗೂ "ಒಂದು ಜಾಡಿಯ ಕತೆ" ಸೇರಿದಂತೆ ಇಲ್ಲಿ ಹತ್ತು ಕವಿತೆಗಳನ್ನು ಅನುವಾದಿಸಿ ಕೊಡಲಾಗಿದೆ.

---

ಕೆ. ವಿ. ತಿರುಮಲೇಶ್, ರೀಡರ್, ಸಿ.ಐ.ಇ.ಎಫ್.ಎಲ್. ಹೈದರಾಬಾದು 500 007

ಮೂರು ಗಾಜಿನ ಹಿಡಿಗಳುದುರಿರುವ ಆ
ತೇಗದ ಕವಾಟನಿಂದ ತೆಗೆ, ಆಕೆ ಹಿಂದೊಮ್ಮೆ
ಪಾರಿವಾಳದ ಕಸೂತಿ ಹಾಕಿದ ವಸ್ತ್ರ
ಹೊದೆಸವಳ ಮುಖ ಮುಚ್ಚವಂತೆ
ಹೊರಗಿಣುಕಿದರೆ ಆ ಕೊರಡು ಪಾದಗಳು
ಅವು ತೋರುವುವು ಅವಳ ಶೀತಲ ಮೌನವನು
ದೀಪ ಲಗತ್ತಿಸಲಿ ಅದರ ತೇಜ
ತಾಜನೆಂದರೆ ರಾಜ ಐಸ್‌ಕ್ರೀಮ್ ರಾಜ

೨. ಹೂಣರರಮನೆಯಲ್ಲಿ ಚಹಾ

ಅಲ್ಲ, ನೀವನುವ ಒಂಟಿಗಾಳಿ ಮುಖೇನ
ಪಶ್ಚಿಮದ ದಿನವ ನಾ ನೇರಳೆ ಬಣ್ಣದಲಿ
ಇಳಿದ ಕಾರಣವಲ್ಲ, ನಾನು ನಾನಲ್ಲದ್ದು.

ಅಹ್! ಯಾವುದದು ಮುಲಾಮು ನನ್ನ ಗಡ್ಡಕ್ಕೆ ಸಿಂಪಡಿಸಿದ್ದು?
ಯಾವುದವು ಶ್ಲೋಕಗಳು ನನ್ನ ಕಿವಿಗಳಲಿ ಗುನುಗಿದ್ದು?
ಯಾವುದದು ಸಮುದ್ರದ ಭರತ ನನ್ನ ಹಾಯ್ದುದು?

ಆ ಚಿನ್ನದ ಮುಲಾಮು ಸುರಿದಿತ್ತು ನನ್ನ ಮನದಿಂದ
ಅವರು ಕೇಳಿದ ಶ್ಲೋಕ ನನ್ನ ಕಿವಿಯಿಂದ
ಆ ಸಮುದ್ರದ ಮೇರೆಯಾದವನು ನಾನೇ:

ನಾ ನಡೆದ ಲೋಕವೂ ನಾನೇ ನನಗೆ ಕಂಡದ್ದು
ಕೇಳಿದ್ದು ಅನಿಸಿದ್ದು ಹೊಮ್ಮಿತು ನನ್ನೊಳಗಿಂದಲೇ;
ಜನಗೆ ನಾನೇ ಅಲ್ಲಿ ಹೆಚ್ಚು ನಿಜವಾಗಿ, ಹೆಚ್ಚು ಹೊರತಾಗಿ.

೩. ಗುಬ್ಬಿನಾಲ್

ಆ ಅತಿಶಯದ ಹೂವು, ಸೂರ್ಯ,
ನೀವೇನೆಂದಿರೋ ಅದೇ.
ನಿಮ್ಮ ಮರ್ಜಿ.

ಕೊಳಕು ಜಗತ್ತು
ಜನ ಬೇಸತ್ತು

ಆ ಕಾಡು ಗರಿಗಳ ಜುಟ್ಟು
ಆ ಮೃಗ ಚಕ್ಷು
ನಿಮ್ಮ ಮರ್ಜಿ

ಆ ಕಾಡು ಕಿಚ್ಚು
ಆ ಬೀಜ
ನಿಮ್ಮ ಮರ್ಜಿ

ಕೊಳಕು ಜಗತ್ತು
ಜನ ಬೇಸತ್ತು

ನಿಮ್ಮ ಮರ್ಜಿ.

೪. ಹತ್ತು ಗಂಟೆಯ ಭ್ರಮನಿರಸನ

ಮನೆಗಳ ತುಂಬಾ ದೆವ್ವಗಳಂತೆ
ಬಿಳಿ ನೈಟ್‌ಗೌನುಗಳು.
ಯಾವುದೂ ಹಸಿರಿಲ್ಲ,
ಅಥವಾ ಹಸಿರೆಳೆಯಿರುವ ನೇರಳೆಯಿಲ್ಲ,
ಅಥವಾ ನೀಲಿಯುಳಿಯುರುವ ಹಸಿರಿಲ್ಲ,
ಒಂದೂ ಹೊಸತಾಗಿಲ್ಲ,
ಅದೇ ಲೇಸಿನ ಕಾಲ್ಚೀಲ
ಅದೇ ಮಣಿಗಳ ಡಾಬು
ಕಾಡ ಬಬೂನುಗಳ ಕಡಲ ಚಿಪ್ಪಿಗಳ
ಕಾಣುವ ಜನರಿಲ್ಲ.
ಮಾತ್ರ ಅಲ್ಲೋ ಇಲ್ಲೊ ಹಳೆ ನಾವಿಕನೊಬ್ಬ
ಕುಡಿದು ಬಿದ್ದು ತನ್ನ ಬೂಟುಗಳಲ್ಲಿ
ಹುಲಿ ಬೇಟೆಯಾಡುವನು
ಕೆಂಪು ಹವೆಯಲ್ಲಿ

೫. ನಿದ್ದೆ ಕೆಗೆಯುವ ದಂಡೆಗಳ ಮೇಲೆ ದಾಸವಾಳ

ಹೇಳ್ತೀನಿ, ಫರ್ನಾಂಡೋ, ಅಂದು
ಮನ ಅಲೆಯಿತು ಪಂತಂಗದಂತೆ,
ಮರಳು ಬಯಲಾಚೆ ಹೂವುಗಳ ನಡುವೆ

ಕಡಲ ಹುಲ್ಲುಗಳ ಹಾವಸೆ ಕಲ್ಲುಗಳ
ಮೇಲೊಗೆದ ತೆರೆಗಳ ಸದ್ದು ಏನಿತ್ತೊ ಅದು
ತೀರ ಧಡ್ಡ ಕಿವಿಯನೂ ಬಡಿದೆಬ್ಬಿಸುವಂತಿರಲಿಲ್ಲ.

ಆಗ ಅದು ಆ ರಕ್ಕಸ ಪತಂಗ
ಅಷ್ಟರ ತನಕ ಆ ಸೋಮಾರಿ ಕಡಲ ರಂಗುನೇರಳೆಯ
ಮತ್ತು ನೀಲಿಯ ನಡುವೆ ಮುಚ್ಚಿ ಮಲಗಿದ್ದು

ಅಷ್ಟರ ತನಕ ಆ ಕೊರಕಲು ದಂಡೆಗುಂಟೆ ನಿದ್ದೆತೆಗೆದದ್ದು
ನೀರ ವ್ಯಥಾಲಾಪಕ್ಕೆ ಕಿವುಡಾಗಿದ್ದು
ಪುಟಿದೆದ್ದು ಕೋರಿತು ಹಳದಿಯ ಪರಾಗಲೇಪಿತ

ಉರಿಗೆಂಪ—ಕೆಂಪೆಂದರೆ ಕೆಂಪು
ಆ ಹಳೇ ಕೆಫೆಯ ಮೇಲಣ ನಿಶಾನೆಯ ಕೆಂಪು
ಕೋರಿ ಅಲೆಯಿತು ಅಲ್ಲಿ ಆ ಇಡಿಯ ಮಂಕು ಸಾಯಾಹ

೬. ಮನುಷ್ಯನ ಸಹಸ್ರಾರು ಕತೆಗಳು

ಆತ್ಮ—ಅವನೆಂದ—ಅದು
ಹೊರಲೋಕದಿಂದ ಮೂಡಿದ್ದು

ಮೂಡಣದ ಜನರಿದ್ದಾರೆ, ಎಂದ
ಅವರೇ ಮೂಡಲು.
ಜಿಲ್ಲೆಯ ಜನರಿದ್ದಾರೆ
ಅವರೇ ಜಿಲ್ಲೆ.
ಕಣಿವೆಯ ಜನರಿದ್ದಾರೆ
ಅವರೇ ಕಣಿವೆ.

ಆಯಾ ಜಾಗದ
ಶಬ್ದಗಳಂತೆ ಸಹಜವಾಗಿರುವ
ಶಬ್ದಗಳಿರುವ ಜನರಿದ್ದಾರೆ
ಕೊಕ್ಕರೆಗಳ ನಾಡಿನಲ್ಲಿ
ಕೊಕ್ಕರೆಗಳ ಕೇಕೆಯ ಹಾಗೆ

ಮಾಂಡೊಲಿನ್ ಎನ್ನೋದು
ಒಂದು ಊರಿನ ವಾದ್ಯ

ಮಾಂಡೊಲಿನುಗಳುಂಟೆ ಪಡುಬೆಟ್ಟಗಳ ?
ಮಾಂಡೊಲಿನುಗಳುಂಟೆ ಬಡಗು ಚಂದ್ರಿಕೆಯ ?

ಲ್ಹಾಸಾದ ಹೆಣ್ಣಿನುಡುಗೆ
ಅದರದೆ ಜಾಗದಲ್ಲಿ
ಆ ಜಾಗದ ಅದೃಶ್ಯಗುಣವೊಂದು
ದೃಶ್ಯಕ್ಕೆ ಬಂದ ಹಾಗೆ.

## ೭. ಹಚ್ಚೆ

ಬೆಳಕೆಂದರೆ ಚೇಡ
ಅದು ನೀರ ಮೇಲ್ಗಡೆ ಹರಿದಾಡುವುದು
ಹಿಮದ ಅಂಚುಗಳಲಿ ಹರಿದಾಡುವುದು
ನಿನ್ನ ಕಣ್ ರೆಪ್ಪೆಗಳ ಕೆಳಗೆ ಹರಿದಾಡುವುದು
ಅಲ್ಲಿ ಹರಡುವುದು ಬಲೆಗಳ
ಇಬ್ಬಲೆಗಳ—

ನಿನ್ ಕಣ್ಣ ಬಲೆಗಳೋ
ನಿನ್ನೆಲುಬು ಮಾಂಸಗಳಿಗೆ
ಕಟ್ಟಿವೆ
ತೊಲೆಗಳಿಗೆ ಅಥವ ಹುಲ್ಲಿಗೆ ಕಟ್ಟಿದಂತೆ

ನಿನ್ ಕಣ್ಣ ತಂತುಗಳಿವೆ
ನೀರ ಮೇಲ್ ಮೈಯಲ್ಲಿ
ಹಿಮದ ಅಂಚುಗಳಲಿ.

## ೮. ತತ್ವ

ನನ್ನ ಸುತ್ತಲೇನೋ ಅದೇ ನಾನು
ಹೆಣ್‌ಮಕ್ಕಳಿಗಿದು ಗೊತ್ತು
ಯಾರೂ ಗೌಡತಿಯಲ್ಲ
ಗಾಡಿಬಿಟ್ಟು ನೂರು ಗಜ ದೂರ
ಇವು ನೋಡಿ ಚಿತ್ರಗಳು
ಒಂದು ಕಪ್ಪನೆ ಮೊಗಸಾಲೆ
ಪರದೆಯಿಳಬಿಟ್ಟ ಎತ್ತರದ ಮಂಚ
ಇವು ಕೇವಲ ನಿದರ್ಶನಗಳು.

## ೯. ಒಂದು ಜಾಡಿಯ ಕತೆ

ಟೆನ್ನಿಸೀಯಲ್ಲಿ ಗುಡ್ಡವೊಂದರ ಮೇಲೆ
ಒಂದು ಜಾಡಿಯನಿಟ್ಟೆ, ಉರುಟಾಗಿತ್ತು
ನಿರಂಬಳ ಕಾಡು ಬೆಳೆವಂತೆ ಮಾಡಿತು  ಅದು
ಆ ಗುಡ್ಡದ ಸುತ್ತು.

ಕಾಡೆದ್ದು ಬಂತು ಅದರೆತ್ತರಕೆ
ಹರಡಿತು ಸುತ್ತು ಮುತ್ತು, ಕಾಡು ಕಾಡಾಗಿರದೆ
ಉರುಟಾಗಿತ್ತು ಜಾಡಿ ನೆಲದಲ್ಲಿ
ಎತ್ತರದ ಒಂದು ನಿಲುವಿನಲ್ಲಿ.

ಎಲ್ಲೆಲ್ಲು ತೆಗೆದು ಕೊಂಡಿತು ಆಧಿಪತ್ಯ
ಬೂದಾಗಿತ್ತು ಜಾಡಿ ಬೋಳಾಗಿತ್ತು
ಅದು ಹಕ್ಕಿಯನೂ ಕೊಡಲಿಲ್ಲ, ಪೊದೆಯನೂ ಬಿಡಲಿಲ್ಲ,
ಇನ್ನೇತರ ಹಾಗೂ ಟೆನ್ನೆಸೀಯಲ್ಲಿ.

## ೧೦. ವಸಂತದಲ್ಲಿ ಪಾರಿವಾಳ

ಕಾವಿರೋ, ಕಾವಿರೋ, ಗೋಡೆಗಳ ಕೆಳಗೆಲ್ಲೊ
ಪಾರಿವಾಳದ ಸಣ್ಣನೆ ಮೊರೆಯೊಂದು
ಮಾಡುವುದು ಅಲ್ಲರೋ ಆ ಸ್ವಲ್ಪವನೆ ಇನ್ನೇನೊ.

ಆ ಸ್ವಲ್ಪವನೂ ಆ ಕತ್ತಲನೂ, ಅದು
ಯಾತರಲಿದೆಯೋ ಅದನೂ, ಎಲ್ಲಿ
ನೆಲೆನಿಂತಿದೆಯೋ ಅದನೂ, ಅಲ್ಲಿ ಪಾರಿವಾಳ

ಈ ಸಣ್ಣನೆ ಮೊರೆಯಿಡುವುದು, ಮನಸಿನಲಿ
ಏಳೋ ಒಂದು ವಿಚಾರದಂತೆ ಅಥವಾ
ತನ್ನತನವ ಹುಡುಕುತಿರೋ ಮನುಷ್ಯನಂತೆ

ಇರೋದರಲಿ ಮತ್ತು ನೆಲೆನಿಂತಿರೋದರಲಿ....ಮೊರೆಯಿಡುವುದು
ಹೊರಪೊದರಿನ ದೊಡ್ಡ ಗಾತ್ರದ ಕುರಿತು ಹಾಗೂ
ಅದರ ಸಂದೇಹದ ಮಹಾ ದುಃಖದ ಕುರಿತು.

ನಿರ್ವಾತದುದ್ದ ಸೀಳಿದ ಗೆರೆಯಂತಿರೋ
ಬೆಳ್ಳಿ ಪಟ್ಟೆಗಳ ಕುರಿತು, ಒಂದು ಸ್ಥಳ
ಹಾಗೂ ಘನವಾಗಿ ಹಗುರಾಗಿ ಇರೋ ಸ್ಥಿತಿ.

ಸೂರ್ಯನ ಮುಂದೆ ಈ ನೊರೆಯಾಗೋದು,
ಕವಿಯ ಬಳಿ ಈ ಪೊರೆಯಾಗೋದು, ಮುಂಜಾನೆಗೆ
ಅತಿ ದೂರ, ನಿದ್ದೆಗೆ ಅತಿ ಹತ್ತಿರ.

---

## ಅನುಸಂಧಾನ

೧

ಪೊನ್ನೆ
ಯಾವುದೋ ಕವಿತೆಯಲ್ಲಿ ತಲ್ಲೀನನಾಗಿ

ಇದ್ದಕ್ಕಿದ್ದಂತೆ
ಗಾಢವಾಗಿ ಆವರಿಸಿ
ಕೊನೆಗೆ
ಪೂರಾ ಒಳಗೊಂಡ
ಆ ನೋವು-ಬೇವುಗಳು

"ನಿಜವಾಗಿಯೂ ಇವು ನನ್ನವೇ"

ಎಂಬ ಸಹಜತೆಯಲ್ಲಿ
ಹೊಂದಿಕೊಂಡವು; ನನ್ನೆಲ್ಲ ಸೂಕ್ಷ್ಮಕ್ಕು
ತೀರ ವ್ಯತಿರಿಕ್ತ ಭಾವಗಳೂ

೨

"ಹಚ್ಚ ಹಸಿರ ಪ್ರಕೃತಿ; ಉಸಿರ
ತಿಳಿನೀಲ ಬಿಳಿ ಮುಗಿಲ
ಸೃಷ್ಟಿ
ಅದರಾಚೆಗಿನ ವಿಶಿಷ್ಟ ವಿನ್ಯಾಸ!"

ಹೀಗೆ ಕವಿತೆ
ಪ್ರಾಸ ಬದ್ಧತೆಯಲ್ಲಲ್ಲವಾದರೂ
ನೋಡಿರಬೇಕಲ್ಲ--ನೀವೂ
ಆ ವರ್ಣವೈಭವ ?

---

ಆಕಾಶ-ಚಂದ್ರ-ತಾರಕೆಗಳು
ಈಭೂಮಿ-ನೆಲ-ಜಲಧಿಗಳು
ಹಾ....ಮಣ್ಣು !
ಹೂ....ಹಣ್ಣು !!

೩

ಈ ನೆಲದ ಮಣ್ಣಲ್ಲಿ
ಮೊಳೆತು ಮೈತಳೆದ ಕುಡಿ
ಚಿಗಿತು ಪಕ್ಕಾದ ಮೊಗ್ಗೆ
ಹಿಗ್ಗಿ ಹೂವಾಗಿ ನಗಲನುಮತಿಯೇ ?

ಸಾರ ಹೀರಿ
ಬಿಟ್ಟೆದ್ದು ನಿಂತ ಬಿಗುಮಾನಕಲ್ಕ ?

ಜಗದಗಲ ಅಳೆವಂತೆ
ಅಲ್ಲೆ ಅಂತರಿಕ್ಷದಲ್ಲೆ ಹಾದ
ಮುಗಿಲ ರಂಗೋಲಿಯಿಂದ ಕದ್ದು ತಂದವರೋ
ಖುದ್ದಾಗಿ ಗೆದ್ದು ಬಂದವರೋ ನೀವು

ಕೊಡುವಿರೇನು-
ಹೂ-ಪಕಳೆಗಳ ನಿಜ ಬಣ್ಣ ;
ಆಸೆ-ಕನಸುಗಳ ಕಣ್ಣ
ಈ ಬದುಕಿಗೆರವಲಿತ್ತವರ ಪತ್ತೆ ?

೪

ಇಂಥ ಹೊಂದಾಣಿಕೆ
ಬದುಕ ವಿಪರ್ಯಾಸ'ವೆಂದರು - ಇರಲಿ
ನನಗಿಲ್ಲಿ ಸರಿಕಂಡದ್ದನ್ನ
ಈ ಲೋಕ ಒಪ್ಪಿಕೊಳ್ಳಲೇಬೇಕೆಂಬ
ಒತ್ತಾಯ - ಶರತ್ತಿಲ್ಲಿಯದು....!?

ಅಲ್ಲ ?

— ರಾಮಚಂದ್ರ ಪೈ

# ಲಂಕೇಶ್‌ರವರಿಗೆ ಒಂದಷ್ಟು ಪ್ರಶ್ನೆಗಳು

—ಭರತಾದ್ರಿ

ಒಂದೂವರೆ ದಶಕಗಳ ಹಿಂದೆ ಸೆಂಟ್ರಲ್ ಕಾಲೇಜಿನ ಆವರಣದಲ್ಲಿ ಬಾಲಿಶ ಕುತೂಹಲಗಳಿಂದ ಬದುಕಿಗೆ ಸ್ಪಂದಿಸುತ್ತಿದ್ದಾಗ ನಾನು ಲಂಕೇಶರನ್ನು ನೋಡಿದ್ದೆ. ಮಾತಾಡಿಯೂ ಇದ್ದೆ. ಒಮ್ಮೆ ಯಾವುದೋ ಶೈಶವಕುತೂಹಲದ ಪ್ರಶ್ನೆ ಕೇಳಿ ಬೈಸಿಕೊಂಡಿದ್ದೆ ಕೂಡ. ಈ ನೆನಪು ಆಕಾಶವಾಣಿಗಾಗಿ ಲಂಕೇಶರನ್ನು ಸಂದರ್ಶಿಸುವಾಗ ಕಚಗುಳಿ ಇಡುತ್ತಿತ್ತು. ಹದಿನೈದು ವರ್ಷಗಳ ಹಿಂದಿನ ಲಂಕೇಶ್ ಯುವೋತ್ಸಾಹದ, ರೊಚ್ಚಿನ, ಖಂಡತುಂಡ ಮನೋಭಾವದ, ಧೃಢಸಂಕಲ್ಪದ ಕಲಾವಿದರಾಗಿದ್ದರು. ಈಗ, ನಾನು ಮೊನ್ನೆ ಮಾತನಾಡಿಸಿದ ಲಂಕೇಶ್ ಕೂಡ ಹಾಗೆ ಇದ್ದರು ; ಆದರೆ ಅವರ ನೋಟದಲ್ಲಿ ಮಾರ್ದವತೆ ಬಂದಿತ್ತು ; ಕಿರಿಕಿರಿಗಳ ಬಗ್ಗೆ ಸಿಟ್ಟು ಮಾಡಿಕೊಳ್ಳದೆ ನಕ್ಕುಬಿಡುವ ಪ್ರಾಜ್ಞತೆ ಅವರಲ್ಲಿತ್ತು. ತಮ್ಮತ್ತ ವಿಶ್ವಾಸದಿಂದ ನೋಡುತ್ತಿರುವ ಅಪಾರ ಯುವಕಯುವತಿಯರನ್ನು ಸರಿಯಾಗಿ ಹೆಜ್ಜೆ ಇಡಿಸುವ ಜವಾಬ್ದಾರಿತನ ಅವರನ್ನು ಗಂಭೀರರನ್ನಾಗಿಸಿತ್ತು. ಆದರೂ ತುಂಟತನ ಅವರನುಡಿಗಳಲ್ಲಿ ಸಾಕಷ್ಟು ಲವಲವಿಕೆ ತಂದಿತ್ತು. ಸಂದರ್ಶನದ ಪೂರ್ಣವಿವರಇಲ್ಲಿದೆ.

ಶ್ರೋತೃಗಳೆ, ಇಂದು ನಮ್ಮೊಡನೆ ಕನ್ನಡದ ಪ್ರಸಿದ್ಧ ಸಾಹಿತಿ ಲಂಕೇಶ್ ಅವರು ಇದ್ದಾರೆ. ತುಂಟತನದಿಂದ, ಪ್ರೀತಿಯಿಂದ, ಅದ್ಭುತ ಲವಲವಿಕೆಯಿಂದ, ಸದಾ ಬದುಕಿನ ಉಲ್ಲಾಸಗಳತ್ತ ಸ್ಪಂದಿಸುವ ಸೃಜನಶೀಲತೆಯಿಂದ ಬರೆಯುವ ಕೆಲವೇ ಭಾರತೀಯ ಲೇಖಕರಲ್ಲಿ ಲಂಕೇಶ್ ಒಬ್ಬರು, ಇತ್ತೀಚಿಗೆ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಇವರ ಸಾಹಿತ್ಯಸಿದ್ಧಿಗೆ ಸಂದಿದೆ. ಅಭಿನಂದನೆಗಳು ಲಂಕೇಶ್ ಅವರೆ.

ಲಂ: ಥ್ಯಾಂಕ್ಯೂ.

ಭ : ಸಂದರ್ಶನ ಈ ಪ್ರಶ್ನೆಯಿಂದ ಪ್ರಾರಂಭ ಮಾಡ್ತೀನಿ, ನಿಮ್ಮನ್ನು ನೀವು ಸಾಹಿತ್ಯ ಸೃಷ್ಟಿಗ್ಯೆತೊಡಗಿಸಕೊಂಡಾಗ ತೀವ್ರವಾಗಿ ಕಾಡೋ ಅಂಥ ಸಂವೇದನೆಗಳು ಯಾವುವು?

---

ಭರತಾದ್ರಿ, ಆಕಾಶವಾಣಿ, ಬೆಂಗಳೂರು-560 001

ಲಂ : ಸಾಹಿತ್ಯ ಸೃಷ್ಟಿಗೆ ಮುಖ್ಯವಾದ ಕಾರಣ-ಸಾಹಿತ್ಯ ಬರೀಬೇಕು ಅನ್ನೊದು. ಕೆಲವು ಅಷ್ಟು ಆಳವಲ್ಲದ ಆಸೆಗಳು ಸಾಹಿತಿಗೆ ಇರ್ತದೆ-ಖ್ಯಾತಿವಂತನಾಗ್ಬೇಕು. ಅದ್ರಿಂದ ಸ್ವಲ್ಪ ಹಣ ಬಂದ್ರೆ ಅದನ್ನು ಮಾಡ್ಬೇಕು. ಇವೆಲ್ಲಾ ಸ್ಫೂರ್ತಿಗಳೆ. ಅದರ ಜೊತೆಗೆ ಸಾಹಿತಿಯಾದವನು ತನ್ನ ಅನುಭವಗಳನ್ನು ತಾನೇ ಕಂಡ್ಕೊಬೇಕು. ತನಗೆ ಆದ ಅನುಭವಗಳಲ್ಲಿ ಎಷ್ಟುಸ್ವಾರಸ್ಯ ಇದೆ, ಅರ್ಥ ಇದೆ, ಅದನ್ನು ತಾನು ಕಂಡುಕೊಳ್ಳೊ ಮೂಲಕ ಇನ್ನೊಬ್ಬರಿಗೆ ಹೇಳಬೇಕು ಆಸೆ ಇರುತ್ತೆ. ಇದು ಒಂದು ರೀತಿನಲ್ಲಿ ಪರಂಪರಾಗತವಾಗಿ ಬಂದಿರುವ, ತನಗೆ ಆದದ್ದನ್ನು ಇನ್ನೊಬ್ಬರಿಗೆ ಹೇಳುವ ಒಂದು ಸಂತೋಷ. ನನಗಂತೂ ಸಾಹಿತ್ಯ ಓದುವಾಗ ಬರೆಯುವಾಗ ಬಹಳ ಸಂತೋಷ ಆಗುತ್ತೆ. ಏನೋಒಂದು ಮುಖ್ಯವಾದದ್ದನ್ನು ಮಾಡಿದ್ದೇನೆ. ಇದ್ರಿಂದ ಬೇರೆ ಜನಗಳಿಗೆ ತಮ್ಮ ಅನುಭವ ಕಂಡ್ಕೋಳಕ್ಕೆ ಸಹಾಯ ಆಗುತ್ತೆ ಅನ್ಸುತ್ತೆ. ಇನ್ನೊಂದು ಮೂಲಭೂತವಾದ ಪ್ರೇರಣೆ ನನ್ನಲ್ಲಿ ಆತಂಕ ಮತ್ತು ನಾವುದನ್ನು ನಾವು ತೀವ್ರವಾಗಿ ಬದುಕುವ ಕ್ರಿಯೆಯಲ್ಲಿನ ಸಾಕ್ಷೀ ಪ್ರಜ್ಞೆ ಅಂತ ಹೇಳಬಹುದೋ ಅದು. ನಾವು ಬದುಕುವಾಗ ನಮ್ಮ ಒಂದು ಭಾಗ ನಮ್ಮನ್ನು ನೋಡ್ತಿರುತ್ತೇ; ನಿನ್ನ ಬದುಕಿನಲ್ಲಿ ಎಷ್ಟು ಒಳ್ಳೆದು ಅರ್ಥಪೂರ್ಣವಾದುದು, ಎಷ್ಟು ಅಲ್ಲ, ಇದನ್ನು ಇನ್ನೊಬ್ಬರಿಗೆ ಹೇಳಿದರೆ ಹ್ಯಾಗಿರುತ್ತೆ ಅಂತ ನಿಮ್ಮ ಒಂದು ಭಾಗ ನಿಮ್ಮನ್ನೇ ನೋಡ್ತಾ ಕೇಳ್ತಾ ಇರುತ್ತೆ. ಇದು ಪ್ರತಿಯೊಬ್ಬ ಲೇಖಕನಿಗೆ ಸ್ಫೂರ್ತಿಯನ್ನು ಕೊಡುತ್ತೆ. ಒಂದು ಕೃತಿಯನ್ನು ನೀವು ಬರೆಯೋದಿಕ್ಕೆ ಶುರು ಮಾಡ್ದಾಗ ನಿಮ್ಮ ಎಲ್ಲಾ ಅನುಭವಗಳು ನಿಮಗೆ ಸ್ಪಷ್ಟವಾಗಿದ್ರೆ ನೀವು ಬರೆಯೋಕ್ಕೆ ಹೋಗಲ್ಲ. ಬರೀತಾ ಬರೀತಾ ಕೃತಿ ರೂಪುಗೊಳ್ತಾ ಹೋಗುತ್ತೆ ಮತ್ತು ನಿಮ್ಮನ್ನು ಬದಲಾಯಿಸ್ತಾ ಹೋಗ್ತದೆ. ಇದು ಒಂದು ರೀತಿಯಲ್ಲಿ ಹೆದರಿಕೆ ಹುಟ್ಟಿಸುವ ವಿಚಾರ ಕೂಡ. ಯಾಕೆಂದ್ರೆ ನೀವು ನಿಮ್ಮ ಅನುಭವ ಶೋಧಿಸ್ತಾಹೋದ ಹಾಗೆ ನಿಮ್ಮ ವ್ಯಕ್ತಿತ್ವವನ್ನೇ ಅದು ರೂಪಿಸೋದ್ರಿಂದ ಇದು ಒಂದು ಥರಾ ರಿಸ್ಕ್ ಆಗುತ್ತೆ. ಒಂದು ಲೇಖನವನ್ನು, ಒಂದು ವರದಿಯನ್ನು ಬರೆದಾಗ ಈ ಥರ ರಿಸ್ಕ್ ಇರೋಲ್ಲ. ಆದರೆ ಒಂದು ಕಲಾಕೃತಿಯನ್ನು ರಚಿಸುವಾಗ You dare to take the risk. ಆದ್ರಿಂದ ಒಳ್ಳೆಯ ಸಾಹಿತಿಗೆ ಹೆದರಿಕೆ ಕೂಡ ಇರುತ್ತೆ.

ಭ : ಸರ್, ಆಮೇಲೆ, ಈ ಸಾಹಿತ್ಯದ ವಿದ್ಯಾರ್ಥಿಗಳು, ತಮ್ಮ ಸಾಹಿತ್ಯದಲ್ಲಿ ಗುರುತಿಸೋಕ್ಕೆ ಎರಡು ಘಟ್ಟಗಳ ಬಗ್ಗೆ ಪ್ರಸ್ತಾಪಿಸ್ತಾ ಇದ್ದೇನೆ. ಒಂದು, ನೀವು ನಿಮ್ಮ ಸಾಹಿತ್ಯದಲ್ಲಿ ಅನ್ಯಾಯಗಳತ್ತ ಸಿಡಿದೇಳುವ ಕೋಪೋದ್ರಿಕ ಯುವಕನಾಗಿ—ಎರಡು ಅತ್ಯಂತ ಪ್ರೀತಿಯಿಂದ, ಬದುಕಿನ ಉಲ್ಲಾಸಗಳತ್ತ ಸ್ಮರಿಸೋ ವ್ಯಕ್ತಿಯಾಗಿ ನೀವು ಕಾಣ್ತೀರಿ. ತಮ್ಮ ಪ್ರತಿಕ್ರಿಯೆ ?

ಲಂ : ವಯಸ್ಸಾಗ್ತಾ ಆಗ್ತಾ ಪ್ರತಿಭಟನೆ, ಭಂಡಾಯ ಕಮ್ಮಿ ಆಗ್ತಾ ಹೋಗುತ್ತೆ. ಉಲ್ಲಾಸ ಕೂಡ ಕಮ್ಮಿ ಆಗ್ತಾ ಹೋಗುತ್ತೆ. ಆದ್ರಿಂದ ನಾನೀಗ



ಶೂದ್ರ

ನನ್ನನ್ನು ನೋಡಿಕೊಳ್ಳೊ ರೀತಿ ಯಾವುದೂ ಅಂತ ಅಂದ್ರೆ ಹೊಣೆಯರಿತ, ಜವಾಬ್ದಾರಿಯುತವಾದ ನಿಲುವು. ಅನ್ಯಾಯಗಳನ್ನು ನೋಡಿದಾಗ ಸಿಟ್ಟಿನಿಂದ ಮಾತಾಡಿದ್ರೆ ಏನೂ ಪ್ರಯೋಜನ ಆಗೊಲ್ಲ. ಆ ಅನ್ಯಾಯಗಳನ್ನು ಬಗೆಹರಿಸೋಕೆ ಮಾರ್ಗೋಪಾಯಗಳನ್ನು, ಸೂಕ್ಷ್ಮವಾದ ಚಿಂತನೆಗಳನ್ನು, ದಿಟ್ಟವಾದ ನಿಲುವನ್ನು ಕಂಡುಕೊಳ್ಳಬೇಕಾಗುತ್ತೆ. ನನ್ನ ಸಿಟ್ಟಿನಲ್ಲಿ ಉಲ್ಲಾಸಕೂಡ ಇರಬಹುದು; ಉಲ್ಲಾಸದಲ್ಲಿ ಸಿಟ್ಟು ಇರಬಹುದು. ಅವನ್ನೆಲ್ಲ ಸೇರಿಸಿ ನಾವು ಒಂದು ಹೊಣೆಯರಿತ, ಜವಾಬ್ದಾರಿಯುತ ನಿಲುವನ್ನು ತಳೆಯಬೇಕಾಗುತ್ತೆ.

ಭ: ಸರ್, ನೀವು ಕಥೆ, ಕವನ, ನಾಟಕ ಹೀಗೆ ಎಲ್ಲ ಪ್ರಕಾರಗಳಲ್ಲೂ ಕೂಡ ಕೆಲಸ ಮಾಡಿದ್ದೀರಿ. ನಿಮ್ಮ ಆಪ್ತವಾದ ಸಾಹಿತ್ಯ ಪ್ರಕಾರ ಯಾವುದು ?

ಲಂ: ನನಗೆ ಬಹಳ ಆಪ್ತವಾದ ಸಾಹಿತ್ಯಪ್ರಕಾರ ಕವನ ಬರೆಯುವುದು. ಈ ಕವನ ಬರೆಯೋದು ಎಲ್ಲಾ ಸಾಹಿತ್ಯಸೃಷ್ಟಿಯ ಒಂದು ರೀತಿಯ ಕೇಂದ್ರವಾದ ಕೋನುಲವಾದ, ನಿಮ್ಮನ್ನು ಸಂಪೂರ್ಣ ತೊಡಗಿಸಿಕೊಳ್ಳೋ ಕಲೆಯಾದ್ದರಿಂದ, ಒಂದು ರೀತಿಯಲ್ಲಿ ಭಾವನೆಗಳ ಅತೀ ಸೂಕ್ಷ್ಮತೆ ಮತ್ತು ಭಾಷೆಯ ಜೀವಂತಿಕೆಯನ್ನು ದುಡಿಸಿಕೊಳ್ಳೋ ಕಲೆಯಾದರಿಂದ ಇದು ನನಗೆ ಬಹಳ ಇಷ್ಟ. ಆದರೆ ನಾನು ಕಾವ್ಯ ಬರೆದದ್ದು ಬಹಳ ಕಮ್ಮಿ. ಕಥೆಗಳು ಬರೆಯೋಕೆ ನನಗೆ ಇಷ್ಟ-ಕಾವ್ಯಬಿಟ್ಟರೆ. ಆದರೆ ನಾನು ನಾಟಕ ಬರೆದಾಗ ನೀವು ನಾಟಕವೇ ಬರೀಬೇಕು ಅಂತೀರಿ. ಕಾದಂಬರಿಯನ್ನು ಬರೆದಾಗ ಕಾದಂಬರಿಯನ್ನೇ ಬರೀಬೇಕು ಅಂತೀರಿ. ಬರ್‍ತಾ ಬರ್‍ತಾ ಏನಾಗುತ್ತೆ ಅಂದ್ರೆ ಯಾವುದು ಕಡಿಮೆ ವೇಳೆ ತೆಗೆದುಕೊಳ್ಳುತ್ತೆ ಮತ್ತು ಯಾವುದು ನಮ್ಮ ಕಡಿಮೆ ಶಕ್ತಿಯನ್ನು ಬಸಿದುಕೊಳ್ಳುತ್ತೆ ಅದನ್ನು ಇಷ್ಟಪಡೋಕೆ ನಾವು ಶುರು ಮಾಡ್ತೇವೆ. ಈಗ ನನಗೆ, ಮೊನ್ನೆ ನಮ್ಮ ವಿಶೇಷ ಸಂಚಿಕೆಗಾಗಿ ಕಥೆ ಬರೆದ ಮೇಲೆ ಕಥೆಗಳನ್ನು ಬರೆಯಬೇಕು ಅಂತ ಬಹಳ ಆಶೆಯಾಗ್ತಾ ಇದೆ; ನನ್ನ ಈ ಹತ್ತು ಹದಿನೈದು ವರ್ಷಗಳ ಅನುಭವವೆಲ್ಲಾ ಒಮ್ಮೆಲೆ ನುಗ್ಗಿ ಬರ್‍ತಾ ಇದ್ದಾವೇನೋ ಅನ್ನಿಸ್ತಾ ಇದೆ. ಇದ್ರಿಂದ ನನ್ನ ಪತ್ರಿಕೋದ್ಯಮಕ್ಕೆ ಅಷ್ಟು ತೊಂದರೆಯಾಗಲಾರದು ಅಂತ ನಾನು ತಿಳ್ಕೊಂಡಿದ್ದೇನೆ.

ಭ: ಆದರೂ ತಮ್ಮ ಅನುಭವದ ವೈಶಾಲ್ಯತೆಯ ಹಿನ್ನೆಲೆಯಲ್ಲಿ ಕಾದಂಬರಿಯಂಥ, ನಾಟಕದಂಥ ವಿಶಾಲವಾದ ಮಾಧ್ಯಮಬೇಕು ಅಂತ ಅನ್ನಸಲ್ವ ? ಮುಸ್ಸಂಜೆಯ ಕಥಾಪ್ರಸಂಗದಂತಹ ಒಳ್ಳೆಯ ಕಾದಂಬರಿಯನ್ನು ಕನ್ನಡಕ್ಕೆ ತಾವು ನೀಡಿದ್ದೀರಿ. ಈಥರಹದ ಸೃಷ್ಟಿಗಳು ತಮ್ಮ ನಿರ್ಧಾರದಿಂದ ವಂಚಿತವಾಗಲ್ವ ?

ಲಂ: ನಮ್ಮಲ್ಲಿ ಏನಾಗುತ್ತೆ ಅಂದ್ರೆ, ಕಾದಂಬರಿ ಅಂತಹ ದೊಡ್ಡ ಪ್ರಕಾರವನ್ನು ತಗೊಂಡಾಗ ಅದಕ್ಕೆ ಎಷ್ಟು ವೇಳೆ ಮತ್ತು ಶಕ್ತಿಯನ್ನು ವ್ಯಯಿಸಬೇಕೋ

ಅಪ್ಪನ್ನು ವ್ಯಯಿಸೋಕೆ ಆಗಲ್ಲ. ಪಶ್ಚಿಮದ ಒಬ್ಬ ನಾಟಕಕಾರ ಅಥವ ಕಾದಂಬರಿಕಾರ ಒಂದು ಕಾದಂಬರಿಯನ್ನು ಬರೆಯೋಕೆ ಆರು ತಿಂಗಳು ತಗೋತಾನೆ. ಒಂದು ನಾಟಕ ವನ್ನು ಅವನು ಬರೆದರೆ ಮತ್ತೆ ಐದು ವರ್ಷ ಏನೂ ಮಾಡ್ಬೇಕಾಗಿಲ್ಲ. ಯಾಕೆ ಅಂದ್ರೆ ಜೀವನನ ಅದ್ರಿಂದ ಸಾಗಿಸಬಹುದು. ನಮ್ಮಲ್ಲಿ ನಾವು ತಿಂಗಳು ಒಂದೂವರೆ ತಿಂಗಳಲ್ಲಿ ಮುಗಿಸ್ಬೇಕಾಗುತ್ತೆ; ಬೇರೆ ಕೆಲ್ಸ ಬೇರೆ ಇರುತ್ತೆ. ಆದ್ರಿಂದ ನಮ್ಮಲ್ಲಿ ದೊಡ್ಡ ಪ್ರಕಾರವನ್ನು ಇಟ್ಟುಕೊಂಡಾಗ ತುಂಬಾ ವೇಳೆ ಮತ್ತು ಶಕ್ತಿ ವ್ಯಯ ಆಗೋದ್ರಿಂದ ನಾವು ಕೆಲವು ಸೀಮಿತ ಪ್ರಕಾರಗಳನ್ನು ಇಷ್ಟ ಪಡಬೇಕಾಗುತ್ತೆ. ಆದರೆ ನನಗೆ ಕಾದಂಬರಿ ಬರೀಬೇಕು ಅನ್ಸಿದೆ., ಇದು ಯಾವುದೂ ಅಡ್ಡಿ ಆಗೊಲ್ಲ ಅನ್ಸುತ್ತೆ. ಆದ್ರೆ ಅನ್ನಿಸಬೇಕೂ ಅಷ್ಟೆ. ಅನ್ನಿಸದೇ ಇದ್ರೆ ನಾನು ಏನೂ ಮಾಡೋದೇ ಇಲ್ಲ.

ಭ: ಇತ್ತೀಚೆಗೆ ನೀವು ಪತ್ರಿಕೋದ್ಯಮದಲ್ಲಿ ನಿಮ್ಮನ್ನು ತೊಡಗಿಸಿಕೊಂಡ ಮೇಲೆ ನಿಮ್ಮಿಂದ ನಿರೀಕ್ಷಿಸಿದಷ್ಟು ಸಾಹಿತ್ಯಸೃಷ್ಟಿ ಸಾಧ್ಯವಾಗಿಲ್ಲ ಎಂಬುದು ಕೆಲವು ಸಾಹಿತ್ಯಾಸಕ್ತರ ಅಭಿಪ್ರಾಯ. ಆದರೆ ನನಗನ್ಸುತ್ತೆ, ಬದುಕಿನತ್ತ ತೀವ್ರ ತುಡಿತದಿಂದ ಸ್ಪಂದಿಸುವಂತಹ ಸಾಹಿತಿಗೆ ಪತ್ರಿಕೋದ್ಯಮ ಒಂದು ಪ್ರಬಲ ಮಾಧ್ಯಮ. ಸಾಹಿತ್ಯಕ್ಕೆ ನೀವು ಪತ್ರಿಕೋದ್ಯಮಕ್ಕೆ ಇಳಿದಿದ್ದರಿಂದ ಅಂತ ಏನೂ ನಷ್ಟ ಆಗಿಲ್ಲ ಅಂತ ಅನ್ಸುತ್ತೆ. ಅಲ್ಟಿಮೇಟ್ ಆಗಿ ನಾವು ಜನಗಳನ್ನು ತಲುಪೋದು, ಸ್ಪಂದಿಸೋದು ಇದೇ ಲೇಖಕರ............

ಲಂ: ಇದಕ್ಕೆ ನಿಮಗೆ ನಮ್ಮ ಪತ್ರಿಕೆ ಬಗ್ಗೆ ಇರೋ ಅಭಿಮಾನ ತೋರ್ಸುತ್ತೆ. ಆದರೆ ನನಗೆ ನೋಡೋದ್ರಲ್ಲಿ ಅಷ್ಟು ತಪ್ಪಿಲ್ಲ ಅನ್ಸುತ್ತೆ. ಯಾಕೇ ಅಂದ್ರೆ ಪತ್ರಕರ್ತ ನಾಗಿ ನಾನು ಒಂದೆರಡು ಮುಖ್ಯವಾದ ಕೆಲಸಗಳನ್ನ ಮಾಡ್ದೆ. ಅದ್ರಲ್ಲಿ ನಮ್ಮ ಸಾರಾ ಅಬೂಬಕ್ಕರ ಅಂತಹ ಕಾದಂಬರಿಕಾರ್ತಿಯನ್ನ . ನಾನು ಅಂತ ಕಾದಂಬರಿಕಾರ್ತಿಯನ್ನ ಪ್ರೋತ್ಸಾಹಿಸಿ ಮುಂದೆ ತರೋಕೆ ನನಗೆ ಸಾಧ್ಯ ಆಯ್ತು. ಬಹಳಜನ ಹೆಣ್ಣು ಮಕ್ಕಳು ಮತ್ತು ತರುಣರು ನಮ್ಮ ಪತ್ರಿಕೆ ಮೂಲಕ ರೂಪುಗೊಂಡಿದ್ದಾರೆ. ನನಗೆ ನಾನೇ ಸಾಹಿತ್ಯ ಬರೆದು ಬಹಳ ಪ್ರಖ್ಯಾತಿ ಪಡೆಯಬೇಕು ಅಂತ ಏನೂ ಸ್ವಾರ್ಥ ಇಲ್ಲ. ಕನ್ನಡ ದಲ್ಲಿ ಯಾರು ಬರೆದರೂ ಕೂಡ, ಚೆನ್ನಾಗಿ ಬರೆದ್ರೆ, ಅರ್ಥಪೂರ್ಣವಾಗಿ ಬರೆದ್ರೆ ನನಗಷ್ಟೇ ಹೆಮ್ಮೆ ಆಗುತ್ತೆ. ನಾನು ಚಿಕ್ಕವನಿದ್ದಾಗ ಇರಬಹುದಾಗಿದ್ದ ಅಸೂಯೆ ಯಾಗಲಿ, ಆ ರೀತಿಯ ಸ್ವಾರ್ಥವಾಗಲಿ ಈಗ ಬಹಳ ಕಮ್ಮಿ. ಈ ಪತ್ರಿಕೋದ್ಯಮ ದಲ್ಲಿ ನಾನು ವರದಿಗಾರನಾಗಿ, ಸಂಪಾದಕನಾಗಿ ಹಲವಾರು ಅನುಭವಗಳನ್ನ ಪಡೆ ದಿರೋದ್ರಿಂದ ಇದು ನನ್ನ ಬರಲಿರುವ ಸಾಹಿತ್ಯಕ್ಕೆ ಬಹಳ ಸಹಾಯ ಆಗುತ್ತೆ ಅಂತ ತಿಳ್ಕೊಂಡಿದ್ದೇನೆ. ಆದ್ರಿಂದ ನೀವು ಯಾವುದೇ ಕೆಲಸವನ್ನು ತೀವ್ರವಾಗಿ ನಿಷ್ಠೆಯಿಂದ ಪ್ರಾಮಾಣಿಕವಾಗಿ ಮಾಡಿದ್ರೆ ಆ ಕೆಲಸದಿಂದ ನಿಮ್ಮ ಅನುಭವ ಜಾಸ್ತಿ ಆಗುತ್ತೆ. ನೀವು

ಏನೇ ಮಾಡಿದ್ರೂ ಅದಕ್ಕೆ ಒಂದು ಅರ್ಥ ಬರುತ್ತೆ. ಆದ್ರಿಂದ ನಾನು ಹತ್ತು ಹದಿನೈದು ವರ್ಷ ಬರೀದೇ ಇರೋದು ಯಾರಿಗೂ ಅಂತ ನಷ್ಟ ಆಗಿಲ್ಲ ಅಂತ ತಿಳ್ಕೊಂಡಿದ್ದೇನೆ.

ಭ: ನಿಜ ಸಾರ್, ನೀವು ಮುಂದೆ ಬರಿಯೋ ಅಂಥ ಕೃತಿ ಈ ಅನುಭವಗಳನ್ನೆಲ್ಲಾ ಒಳಗೊಂಡು ಒಂದು ಮಹತ್ವದ ಕೃತಿ ಆಗಬಹುದು. ಆಮೇಲೆ ತಾವು ಎಲ್ಲಾ ಕಲಾಮಾಧ್ಯಮಗಳಲ್ಲಿ-ಸಾಹಿತ್ಯ, ರಂಗಭೂಮಿ, ಸಿನಿಮಾ-ಕೆಲಸ ಮಾಡಿದ್ದೀರಿ; ಆಗಾಗ್ಗೆ ಮಾಧ್ಯಮಗಳನ್ನು ಬದಲಾಯಿಸೋದು ಕೂಡ ತಮಗೆ ಒಂದು ಥರ ಫ್ಯಾಶನ್ ಆಗಿಬಿಟ್ಟಿದೆ. ಫ್ಯಾಶನ್ ಅಂತ ಅಲ್ಲ, ನಿಮ್ಮ ಪಾಲಿಗೆ ಅದು ಒಂದು ತೀವ್ರವಾದಂತಹ ತುಡಿತ ಆಗಿರಬಹುದು. ಈ ರೀತಿ ಭಿನ್ನ ಭಿನ್ನ ಮಾಧ್ಯಮಗಳಲ್ಲಿ ಸೃಜನಶೀಲರಾಗಿ ತೊಡಗುವುದು ಕಲಾವಿದನ ಒಟ್ಟು ಬೆಳವಣಿಗೆಗೆ ಯಾವ ರೀತಿ ಪೂರಕ ? ಸ್ವಲ್ಪ ಸ್ಪಷ್ಟ ಪಡಿಸ್ತೀರ.

ಲಂ: ನನಗೆ ಮಾಧ್ಯಮಗಳನ್ನು ಬದಲಾಯಿಸೋದು ಕೂಡ ಅಷ್ಟು ತೊಂದ್ರೆ ಆಗಿಲ್ಲ. ಯಾಕೆ ಅಂತ ಹೇಳಿದ್ರೆ, ನನ್ನ ಕೇಂದ್ರದ ಒಂದು ಪ್ರಜ್ಞೆ, ಯಾವುದನ್ನು ನಾನು ಸಾಕ್ಷಿ ಪ್ರಜ್ಞೆ ಅಂತೀನಿ, ಒಂದು ಹೊಣೆಯರಿತ ಜೀವನದ ಗ್ರಹಿಕೆ ಅಂತೀನಿ ಇದು. ಯಾವುದನ್ನು ಅವ್ಯಕ್ತವಾದ Comprehencive ಆದದ್ದು ಅಂತೀವೋ ಸಾಹಿತ್ಯ, ಸಂಗೀತ, ರಾಜಕೀಯ, ಕ್ರೀಡೆ ಇವು ಯಾವುವನ್ನು ಒಂದಕ್ಕಿಂತ ಒಂದು ಭಿನ್ನ ಅಂತ ಭಾವಿಸಿಲ್ಲ. ನಾನು ಸೋಶಲಿಸ್ಟ ಆದ್ರಿಂದ ಒಬ್ಬ ಒಳ್ಳೆಯ ಸಾಹಿತಿ ಮತ್ತು ಒಳ್ಳೆಯ ರಾಜಕಾರಣಿ ಹಾಗೂ ಒಬ್ಬ ಒಳ್ಳೆಯ ಗಾಯಕ ಈ ಎಲ್ಲರಲ್ಲೂ ಒಂದು ಒಳಸಂಬಂಧ ಇರುತ್ತೆ ಅಂತ ಭಾವಿಸ್ತೇನೆ. ಆದ್ರಿಂದ ನಾನು ಸಿನಿಮಾ ಮಾಡೋದು, ಸಾಹಿತ್ಯ ರಚಿಸೋದು, ಈ ಪತ್ರಿಕೆಯನ್ನು ಮಾಡೋದು ಇವೆಲ್ಲಕ್ಕೂ ಒಂದು ಸಂಬಂಧ ಇದೆ. ಮಾಧ್ಯಮಗಳ ಬದಲಾವಣೆಯಿಂದ ನನ್ನ ವ್ಯಕ್ತಿತ್ವದ ಬದಲಾವಣೆ ಆಗಿಲ್ಲ ಅಂತ ನಾ ಹೇಳಬಲ್ಲೆ. ಇವೆಲ್ಲಾ ಮಾಧ್ಯಮಗಳಲ್ಲಿ ನೀವು ಯಾವ ದನ್ನು ಇಷ್ಟ ಪಡ್ತೀರಿ ಅಂತ ಕೇಳಿದ್ರೆ ನಾನು ಜೀವನವನ್ನೇ ತುಂಬ ಇಷ್ಟ ಪಡ್ತೀನ ಅಂತ ಹೇಳತ್ತೀನಿ. ಅದು ಇದಕ್ಕಿಂತ ಕಮ್ಮಿ, ಇದು ಅದಕ್ಕಿಂತ ಜಾಸ್ತಿ ಅಂ ಹೇಳಕ್ಕಾಗಲ್ಲ. ಇದು ಒಟ್ಟಾರೆಯಾಗಿ ನನ್ನ ವ್ಯಕ್ತಿತ್ವವನ್ನು ಬೆಳಸಿದ್ರೆ-ಮಾಧ್ಯಮ ಗಳ ಬದಲಾವಣೆ. ಆದ್ರಿಂದ ನನಗೆ ನನ್ನ ಜನಕ್ಕೆ ಏನಾದ್ರು ಒಳ್ಳೆದಾಗಿದ್ರೆ ಅದ ಲಾಭನೇ ಹೊರತು ಇದರ ಬಗ್ಗೆ ನಾನು ಪಾಪಪ್ರಜ್ಞೆಯಾಗಲಿ, ತಪ್ಪಾಯ್ತು ಅಂ ತಿಳ್ಕೊಳ್ಳದಾಗಲೀ ಮಾಡಬಾರದು ಅಂತ ಅನ್ಸುತ್ತೆ.

ಭ: ಅಂತೂ ಕಲಾವಿದನ ಒಟ್ಟು ಬೆಳವಣಿಗೆಗೆ ಈ ರೀತಿಯ ಪ್ರಯೋಗಗಳ ಬೇಕೂ ಅಂತ ಅನ್ಸುತ್ತ ?

ಲಂ: See, ಜೀವನದಲ್ಲಿ ನೀವು ಯಾವುದನ್ನ ಮನಸ್ಸಿಟ್ಟು ಸಂತೋಷಪಡಿ ಪಡ್ತೀರೋ, ಹಾಗೆ ಯಾವ ಕೆಲಸ ಸಂತೋಷ ಕೊಟ್ಟು ಕ್ರಿಯಾಶೀಲತೆಯ

ಕೊಡ್ರ

ಕಾಪಾಡುತ್ತೋ ಅವೆಲ್ಲವೂ ಮುಖ್ಯವಾಗೋದ್ರಿಂದ—ಇದ್ರಿಂದ ನಾನು ಬಹಳ ಬೆಳದಿದ್ದೀನಿ ಅಂತ ಹೇಳಿದ್ರೆ ದುರಹಂಕಾರ ಆಗುತ್ತೆ; ಏನೂ ಬೆಳೆದೇ ಇಲ್ಲ ಅಂದ್ರೆ ಅದು ಕೆಟ್ಟ ವಿನಯ ಆಗುತ್ತೆ. ಆದ್ರಿಂದ ನಾನೀಗ ಏನು ಮಾಡ್ತಾ ಇದ್ದೇನೆ, ಏನು ಬರೀತಾ ಇದ್ದೇನೆ, ಯಾವ ರೀತೀಲಿ ಬದುಕ್ತಾ ಇದ್ದೇನೆ ಇವು ನಿಜವಾದ ಮಾನದಂಡಗಳೇ ಹೊರತು ಬಾಕಿ ಎಲ್ಲಾ ಚಿಕ್ಕ ಪುಟ್ಟ ವಿಚಾರಗಳು ಅನ್ಸುತ್ತೆ.

ಭ: ನಿಮ್ಮ ಪತ್ರಿಕೆಯ ಟೀಕೆ ಟಿಪ್ಪಣಿಗಳನ್ನು ನಾನು ಕಳೆದ ಐದು ವರ್ಷಗಳಿಂದ ಅತ್ಯಂತ ಗಂಭೀರವಾಗಿ ಅವಲೋಕಿಸ್ತಾ ಬಂದಿದ್ದೇನೆ. ಅಲ್ಲಿ ಗಾಂಧಿ ನಿಮ್ಮ ಮೇಲೆ ಬೀರಿರೋ ಪ್ರಭಾವ ಎಷ್ಟು ಗಾಢವಾಗಿದೆ, ಆಮೇಲೆ ನಿಮಗೆ ಗಾಂಧಿ ಮೇಲೆ ಇರೋ ಪ್ರೀತಿ ಎಷ್ಟು ನಿಕಟವಾಗಿದೆ ಅನ್ನೋದು ಅರ್ಥವಾಗುತ್ತೆ. ನಿಮ್ಮ ಸೃಜನಶೀಲ ಸಾಹಿತ್ಯದ ಮೇಲೂ ಕೂಡ ಗಾಂಧಿ ಯಾವ ರೀತಿ ಪ್ರಭಾವ ಬೀರಬಹುದು ?

ಲಂ: ನಾನು ಅನೇಕ ಜನರ ಥರ ಗಾಂಧೀಜಿ ಬಗ್ಗೆ ಒಂದಾನೊಂದು ಕಾಲದಲ್ಲಿ ವ್ಯಂಗ್ಯ ನಿಲುವನ್ನು ತಳೆದಿದ್ದೆ. ಏನಾಯ್ತು, ಈ ದೇಶದ ಒಂದು ವಿಷಮ ಪರಿಸ್ಥಿತಿಯಲ್ಲಿ ನಮ್ಮ ಜೀವನದ crisisನಲ್ಲಿ ಗಾಂಧೀಜಿಯ ಪ್ರಾಮುಖ್ಯ ಗೊತ್ತಾಯ್ತು. ಅದು ತುರ್ತುಪರಿಸ್ಥಿತಿಯಲ್ಲಿ ಹಾಗಾಯ್ತು. ಆವಾಗ ಆ ವಿಷಮ ಪರಿಸ್ಥಿತಿಯಲ್ಲಿ ರಾಜಕಾರಣಿಗಳು, ಸರ್ವಾಧಿಕಾರಿಗಳು ಗಾಂಧೀಜಿಯ ಹೆಸರೂ ಎತ್ತಿದ್ರೆ ಬೆಚ್ಚಿ ಬೀಳ್ತಾ ಇದ್ರು. ಗಾಂಧೀಜಿ ಉದ್ಧಟರಿಗೆ, ಅಹಂಕಾರಿಗಳಿಗೆ, ಸರ್ವಾಧಿಕಾರಿಗಳಿಗೆ, ಯಾರು ಯಂತ್ರತಂತ್ರದ ಮೂಲಕ, ಸೈನ್ಯದ ಮೂಲಕ ಜನರನ್ನು ಹತೋಟಿಯಲ್ಲಿಡಬೇಕು ಅಂತ ಯೋಚಿಸ್ತಾರೆ ಅವರಿಗೆ ಸಿಂಹಸ್ವಪ್ನ ಅನ್ನೊದನ್ನು ಮರೆಯದೇ ಇರೋಣ. ಪ್ರಜೆಗಳಿಗೆ ಯಾರು ಸಿಂಹಸ್ವಪ್ನವಾಗಿದ್ದಾರೋ ಆ ಜನರ ರೋಗಗ್ರಸ್ತ ಮನಸ್ಸಿಗೆ ಗಾಂಧೀಜಿಯೇ ನಿಜವಾದ ಉತ್ತರ ಅನ್ನೋದನ್ನ ನಾನು ಕಂಡ್ಕೊಂಡೆ. ಯಾವನಾದರೂ ಒಬ್ಬ ವ್ಯಕ್ತಿ ಮನುಷ್ಯನ ಅತ್ಯಂತ ಖಾಸಗಿಯಾದ ಭಾವನೆಗಳಿಂದ ಹಿಡಿದು ಮನುಷ್ಯನ ಪ್ರತಿಯೊಂದು ಸಾಮಾಜಿಕವಾದ ಮುಖದವರೆವಿಗೂ ಬಹಳ ತೀವ್ರವಾಗಿ ಯೋಚಿಸಿ, ಕಷ್ಟಗಳಿಗೆ ಪರಿಹಾರವನ್ನು ಕಂಡುಹಿಡಿದ ಯಾರಾದರೂ ಒಬ್ಬ ವ್ಯಕ್ತಿಯಿದ್ದರೆ ಅವರು ಗಾಂಧೀಜಿ. ಗಾಂಧೀಜಿ ಬಹಳ ನೀವು ಕಷ್ಟದಲ್ಲಿದ್ದಾಗ, ಮಾನಸಿಕ ತೊಂದರೆಯಲ್ಲಿದ್ದಾಗ, ಸಾಮಾಜಿಕ ತೊಂದರೆಯಲ್ಲಿದ್ದಾಗ, ದುಷ್ಟರ ಭಯದಲ್ಲಿದ್ದಾಗ ಸಹಾಯವಾಗ್ತಾರೆ. ಅಂತಹ ವಿಷಮ ಪರಿಸ್ಥಿತಿಯಲ್ಲಿ ನಾನು ಗಾಂಧೀಜಿಯನ್ನು ಗ್ರಹಿಸಿ ಅವರ ಬಗ್ಗೆ ಬರೆದದ್ದರಿಂದ ಗಾಂಧೀಜಿ ಬಗ್ಗೆ ನನಗೆ ಕುತೂಹಲ ಜಾಸ್ತಿ ಆಗಿ ಅವರ ಬಗ್ಗೆ ಬಹಳ ಓದಿದೆ. ನಮ್ಮ ದೇಶ ಎಷ್ಟೇ ತಾಂತ್ರಿಕವಾಗಿ, ವೈಜ್ಞಾನಿಕವಾಗಿ, ಕೈಗಾರಿಕೆಯ ದೃಷ್ಟಿಯಿಂದ ಮುಂದುವರೆದರೂ ಕೂಡ ಗಾಂಧೀಜಿಯನ್ನು ಪೂರ್ತಿ ಮರೆತುಬಿಟ್ಟರೆ ಅದ್ರಿಂದ ತೊಂದರೆ ಕಾದಿದೆ. ಒಂದು ಸಮಾಜಕ್ಕೆ ಆರ್ಥಿಕ ತೊಂದರೆಗಳಷ್ಟೇ, ರಾಜಕೀಯ ತೊಂದರೆಗಳಷ್ಟೇ ಮಾನಸಿಕ ತೊಂದರೆಗಳೂ ಮುಖ್ಯ. ಮಾನಸಿಕ ತೊಂದರೆಗಳಿಗೆ

ನೀವು ಈಡಾದಾಗ ಅದನ್ನು ಕಡಿಮೆ ಮಾಡುವಂತಹ ಒಬ್ಬ ವ್ಯಕ್ತಿ ಗಾಂಧೀಜಿ. ಹೀಗಾಗಿ ಗಾಂಧೀಜಿ ಬಗೆಗಿನ ನನ್ನ ಚಿಂತನೆ ತೀವ್ರವಾಗುತ್ತಾ ಹೋದಹಾಗೆ, ಸಾಹಿತ್ಯದ ಬಗ್ಗೆ ಅಷ್ಟೇ ತೀವ್ರವಾಗಿ ಯೋಚಿಸ್ದೇ ಇದ್ದ ಗಾಂಧಿ ಕೂಡ-ನನ್ನ ಕ್ರಿಯಾಶೀಲಚಿತ್ತಕ್ಕೆ ಬಹಳ ಮುಖ್ಯರಾದವರು. ಒಬ್ಬ ವಿಜ್ಞಾನಿಗೆ, ಅಧ್ಯಾಪಕನಿಗೆ, ಕಲಾವಿದನಿಗೆ ಮೂವರಿಗೂ ಅರ್ಥ ಪೂರ್ಣವಾಗಿ ಕಂಡು ಅವರ ಕ್ರಿಯಾಶೀಲತೆಯನ್ನು ಹೆಚ್ಚಿಸೋ ಅಂತಹ ವ್ಯಕ್ತಿ ಗಾಂಧೀಜಿ ಅಂತ ನನಗೇ ಅನ್ಸುತ್ತೆ. ಅವರಲ್ಲಿ ದೋಷಗಳಿರಲಿಲ್ಲ ಅಂತಲ್ಲ. ಗಾಂಧೀಜಿ ಬಹಳ ಪ್ರಚಾರ ಪ್ರಿಯರಾಗಿದ್ದರು. ಗಾಂಧೀಜಿ ಕೆಲವು ವಿಷಯಗಳಲ್ಲಿ ತಪ್ಪಾಗಿ ಯೋಚಿಸ್ತಾ ಇದ್ರು. ಗಾಂಧೀಜಿ ಹುಲುಮಾನವರ ತರಹ ಸಣ್ಣ ಪುಟ್ಟ ತಪ್ಪುಗಳನ್ನೂ ಮಾಡ್ತಾ ಇದ್ರು. ಈ ತಪ್ಪುಗಳಿಂದಾಗಿಯೇ ಗಾಂಧೀಜಿ ನಮ್ಮಂತಹ ಸಾಮಾನ್ಯರಲ್ಲೂ ಕೂಡ ಉತ್ತಮಿಕೆಯ ಭರವಸೆಯನ್ನು ಹುಟ್ಟಿಸ್ತಾರೆ. ಒಬ್ಬ ವ್ಯಕ್ತಿ ಪರಿಪೂರ್ಣವ್ಯಕ್ತಿ ಆಗಿದ್ರೆ ಅವನ ಬಗ್ಗೆ ನಮಗ ಕುತೂಹಲ ಇರೋಲ್ಲ; ಅವನಿಂದ ನಮಗೆ ಅಷ್ಟು ಅನುಕೂಲ ಆಗೊಲ್ಲ. ಒಬ್ಬವ್ಯಕ್ತಿ ಮನುಷ್ಯನ ದೌರ್ಬಲ್ಯಗಳ ಮತ್ತು ಶಕ್ತಿಯ ಹತ್ತಿರ ಇರೋದಾದ್ರೆ ಅದ್ರಿಂದ ನಮಗೆ ಬಹಳ ಸಹಾಯ ಆಗುತ್ತೆ. ಒಬ್ಬ ಸಾಮಾನ್ಯವ್ಯಕ್ತಿಯ ಉದ್ಧಾರ ಕೂಡ ಸಾಧ್ಯ ಅನ್ನೋ ಆಸೇನ ಗಾಂಧೀಜಿ ಹುಟ್ಟಿಸ್ತಾರೆ. ಹೀಗಾಗಿ ದಿನ ನಿತ್ಯದ ಕೆಲಸಗಳಲ್ಲಿ ತೊಡಗಿರುವ ವ್ಯಕ್ತಿ, ದಿನ ನಿತ್ಯದ ದಬ್ಬಾಳಿಕೆ ಅಹಂಕಾರಗಳನ್ನು ಎದುರಿಸುತ್ತಿರುವ ವ್ಯಕ್ತಿ ಇವರೆಲ್ಲರಿಗೂ ಮುಖ್ಯ ಆಗೋದ್ರಿಂದ ಗಾಂಧೀಜಿ ನಮ್ಮಂತೋರಿಗೆ ಬಹಳ ಮುಖ್ಯ ಆಗ್ತಾರೆ. ಕಲಾವಿದರಿಗಂತೂ ಬಹಳ ಮುಖ್ಯ ಆಗ್ಬೇಕು ಅಂತ ನಾನು ತಿಳ್ಕೊಂಡಿದ್ದೇನೆ.

ಭ: ಈ ಅಕೆಡೆಮಿ ಪ್ರಶಸ್ತಿಗಳು, ಒಂದು ಸಾವಿರ ಬರ್ಲಿ ಅಥವ ಹೋಗಲಿ, ಒಬ್ಬ ನಿಜವಾದ ಸಾಹಿತಿಗೆ ತನ್ನ ಸಾಹಿತ್ಯ ಸೃಷ್ಟಿಯ ಬಗ್ಗೆ ಅಸಮಾಧಾನ ಇದ್ದೇ ಇರುತ್ತೆ. ಅವನ ಮನಸ್ಸಿನಲ್ಲಿ ಅನೇಕ ಅಪ್ರಕಟಿತ ಮಹಾಕಾವ್ಯಗಳು, ಕಾದಂಬರಿಗಳು ಸೃಷ್ಟಿರೂಪು ಪಡೆಯುವ ಪ್ರಕ್ರಿಯೆಯಲ್ಲಿ ಇದ್ದೇ ಇರುತ್ತವೆ. ಒಬ್ಬ ಸಾಹಿತಿ ಎಂದೂ ತನ್ನ ಸೃಷ್ಟಿ ಕ್ರಿಯೆಯಿಂದ ವಿಮುಖನಾಗೊಲ್ಲ. ತಮ್ಮಿಂದ ಕನ್ನಡದ ಜನ ಕೆಲವು ಮಹತ್ವಾಕಾಂಕ್ಷೆಯ ಕೃತಿಗಳನ್ನು ನಿರೀಕ್ಷಿಸಬಹುದ? ನಿಮ್ಮ ಮನಸ್ಸಿನಲ್ಲಿ ಅಡಗಿರೋ ಒಂದೆರಡು ಕೃತಿಗಳ ಬಗ್ಗೆ ಒಂದೆರಡು ಮಾತು ಹೇಳಿ—

ಅಂ: ಮನಸ್ಸಿನಲ್ಲಿ ಅಡಗಿರೋ ಕೃತಿಗಳು ಕೃತಿಗಳೇ ಅಲ್ಲ. ಯಾಕೆ ಅಂತ ಹೇಳಿದ್ರೆ, ನೀವು ಬರೆಯೋದಕ್ಕೆ ಶುರುಮಾಡಿ, ಅದ್ರಿಂದ ನೀವು ರೂಪುಗೊಂಡು ನಿಮ್ಮ ಕೃತಿಯನ್ನು ಸಿದ್ಧಗೊಳಿಸಿ ಸವಾಲುಗಳನ್ನು ಎದುರಿಸಬೇಕೇಹೊರತು ಮುಂಚಿನೇ ನನ್ನ ಮನಸ್ಸಿನಲ್ಲಿ ಕಥೆ ಇದೆ ಈ ಕಥೆ ಇದೆ, ಒಂದು ಕಾವ್ಯ ಇದೆ, ನಾಟಕ ಇದೆ ಅಂತ ಹೇಳೋಕ್ಕಾಗಲ್ಲ. ಒಂದೇನೂ ಅಂತ ಹೇಳಿದ್ರೆ, ಬರೀಬೇಕು ಅಂತ ಒಂದು ಹುಮ್ಮಸ್ಸು ಬಂದು ಬರೆಯೋದಿಕ್ಕೆ ಕೂತು ಬರೆದಾಗ ಮಾತ್ರ ಅದು ಒಳ್ಳೆಯ ಕೃತಿಯೋ ಅಲ್ಲವೋ

ಅನ್ನೋದು ಗೊತ್ತಾಗುತ್ತೆ. ನನಗೆ ಬೇರೆ ಸಂತೋಷಗಳು ಮತ್ತು ಬೇರೆ ರೀತಿಯ ಹೊಣೆಗಳು ಇದ್ದು ನನ್ನ ವ್ಯಕ್ತಿತ್ವ ಅವರಿಂದ ಬೆಳೀತಾ ಇದ್ರೆ, ಅವರಿಂದ ನನ್ನ ಜೀವನ ಪರಿಪೂರ್ಣ ಅಂತ ಅನ್ನಿಸಿದ್ರೆ ಸಾಹಿತ್ಯಾನ ನಾನು ಬರೀದೇನೇ ಇರ್ಬಹುದು. ಹಾಗಂತ ಹೇಳ್ಬಿಟ್ಟು ಹೀಗಾಗಬಾರದು, ನಾನು ಪ್ರಖ್ಯಾತ ಸಾಹಿತಿ ಆಗಬೇಕು, ಇವರಲ್ಲೇನೋ ಇರೋಹಾಗೆ ಕಾಣ್ಸುತ್ತೆ, ಅವಾರ್ಡುಗಿವಾರ್ಡು ಈ ತರಹದ್ದೆಲ್ಲಾ ಅಂತ ಬರೀತಾ ಕೂತ್ಕೊಂಡ್ರೆ ಅದು ದೊಡ್ಡ ಮೂರ್ಖತನ ಆಗುತ್ತೆ. ನನಗೀಗ ಈ ಅಕಾಡೆಮಿಯ ಪ್ರಶಸ್ತಿ ಬಂದಾಗ ಸಂತೋಷನೂ ಆಗ್ತಾ ಇಲ್ಲ. ಯಾಕೆ ಅಂತ ಹೇಳಿದ್ರೆ, ಇದನ್ನು ನಾನು ನಿರೀಕ್ಷಿಸಿರಲಿಲ್ಲ; ಇದಕ್ಕಾಗಿ ಎಂದೂ ಪ್ರಯತ್ನನೂ ಮಾಡೊಲ್ಲ. ಇದು ಒಂದು ರೀತಿಯ ಶಿಸ್ತು ಇರಬಹುದು, ಒಂದು ರೀತಿಯ ನಿರ್ಲಕ್ಷ್ಯ ಇರಬಹುದು. ಆದರೆ ಒಂದು ಮಾತು ನಿಜ– ನಮ್ಮ ಅಕಾಡೆಮಿ ಅಂತಹವು ಪ್ರಶಸ್ತಿಯನ್ನು ಕೊಟ್ಟಾಗ ಈ ಅಕಾಡೆಮಿ ಯಾವ ತರಹದ್ದು ಅಂತ ನಾವು ಯೋಚನೆ ಮಾಡ್ಬೇಕಾಗುತ್ತೆ. ಅಕಾಡೆಮಿ ಇವತ್ತು ಸರಕಾರದಿಂದ ನೇರವಾಗಿ ನಡೆಸಲ್ಪಡ್ತಾ ಇರೋ ಒಂದು ಸಂಸ್ಥೆ. ಅಲ್ಲಿಯ ಅಧ್ಯಕ್ಷ ಮತ್ತು ಸದಸ್ಯರೂ ಎಲ್ಲರನ್ನೂ ಸರಕಾರ ನೇಮಕ ಮಾಡುತ್ತೆ. ಈ ಸರಕಾರದ ಸೂಚನೆ ಪ್ರಕಾರ ಕೂಡ ಈ ಪ್ರಶಸ್ತಿಗಳು ಬರ್ತಾ ಇದ್ರೆ–ನನಗೊತ್ತಿಲ್ಲ-ಬರ್ತಾಇದ್ರೆ ನಮ್ಮಂತಹ ಪತ್ರಕರ್ತರಿಗೆ ಸಂಶಯ ಶುರುವಾಗುತ್ತೆ; ಅದರ ಬಗ್ಗೆ ಅಂಜಿಕೆ, ತಾತ್ಸಾರ ಶುರುವಾಗುತ್ತೆ. ಆದ್ರಿಂದ ಸರಕಾರ ಇದನ್ನು ಒಂದು ಸ್ವಾಯುಕ್ತ ಸಂಸ್ಥೆಯಾಗಿ ಸಾಂಸ್ಕೃತಿಕವಾಗಿ, ಸ್ವಾತಂತ್ರ್ಯ ಇರೋ ಸಂಸ್ಥೆಯಾಗಿ ಬೆಳೆಸೋದಕ್ಕೆ ಪ್ರಯತ್ನ ಪಡಬೇಕು. ಇಂತಹ ಒಂದು ಸಂಸ್ಥೆ ಇದ್ದಮೇಲೆ ಅದ್ರಿಂದ ದೂರ ಇರೋ ಕಲೆಯನ್ನ ಸರಕಾರ ಕಲಿಯಬೇಕು.

ಧ: ಕಡೆಯದಾಗಿ ಒಂದು ಪ್ರಶ್ನೆ - ನಿಮ್ಮ ಮೇಲೆ ಅತ್ಯಂತ ಪ್ರಭಾವ ಬೀರಿದ ಸಾಹಿತಿ ಬಗ್ಗೆ ತಿಳಿದುಕೊಳ್ಳಬಹುದೆ?

ಲಂ: ಬಹಳ ಜನಕ್ಕೆ ಸಂತೋಷ ಪಡಿಸಬಹುದಾದ್ರೆ ಕುವೆಂಪು, ಬೇಂದ್ರೆ ಇವರೆಲ್ಲಾ ನನ್ನ ಮೇಲೆ ಬಹಳ ಪ್ರಭಾವ ಬೀರಿದ್ದಾರೆ ಅಂತ ಹೇಳಬಹುದು. ನನಗೆ ನಿಜಕ್ಕೂ ಗುರುತರವಾದ ಪ್ರಭಾವವನ್ನು ಬೀರಿರೋ ವ್ಯಕ್ತಿ ಕಾಮು-ಆಲ್ಬರ್ಟ್‌ಕಾಮು-ಕಾಮು ಫ್ರೆಂಚ್ ಸಾಹಿತಿ. ಅವನ ಒಂದು ನಿರ್ಮೋಹದ ನಿಷ್ಠುರವಾದ ಆದರೆ ಪ್ರೀತಿಯನ್ನು ಹೊರಗಡೆ ಬಿಡದೇ ಇರೋ ಎಲ್ಲಾ ಕಾಳಜಿಗಳನ್ನು ಒಳಗೊಳ್ಳೋ ಅಂಥ ನೋಟ ಮತ್ತು ಸಾಹಿತ್ಯವನ್ನು ಸೃಷ್ಟಿಸಿ ಮರೆಯಬೇಕು ಅನ್ನುವ ಭ್ರಮೆ ಇಲ್ಲದ ಒಂದು ನೋಟ. ಈ ಜೀವನದ ಒಂದು ದುರಂತವನ್ನು ಅರಿತು-ದುರಂತವನ್ನು ನತೆಯಿಂದ ನಿಭಾಯಿಸಿಕೊಂಡು ಹೋಗಬೇಕು ಅನ್ನೋ ದೃಷ್ಟಿ ಇವೆಲ್ಲಾ ನನ್ನ ಮೇಲೆ ಬಹಳ ಪ್ರಭಾವ ಬೀರಿದೆ. ಈ ಕಾಮುವಿನಿಂದ ನನಗಾದ ತೊಂದ್ರೆ

ಏನೂ ಅಂತ ಹೇಳಿದ್ರೆ - ಸಾಹಿತ್ಯವನ್ನು ಸೃಷ್ಟಿ ಮಾಡಿಬಿಡಬೇಕು ಅನ್ನುವ ಉತ್ಸಾಹ, ಭರ ಅಷ್ಟು ಒಳ್ಳೆಯದಲ್ಲ ಅನ್ನಿಸಿದ್ದರಿಂದ ಸಾಹಿತ್ಯ ಸೃಷ್ಟಿ ಮಾಡ್ಬೇಕು ಅವಾರ್ಡು ಗಿಟ್ಟಿಸ್ಬೇಕು ಅನ್ನೋ ಆಶೆ, ದುರಾಶೆ ಕಡಿಮೆ ಆಯ್ತು. ಇದೂ ಒಂದು ಒಳ್ಳೆಯ ಪ್ರಭಾವ ಅಂತ ತಿಳ್ಕೊಂಡಿದ್ದೇನೆ.

ಭ: ಇಷ್ಟು ಹೊತ್ತು ಬಹಳ ಆಸಕ್ತಿ ಹುಟ್ಟಿಸೋ ಅಂತಹ ಸಂಭಾಷಣೆ ನಡೆಸಿದ್ದಕ್ಕೆ ಧನ್ಯವಾದ. ನಮಸ್ಕಾರ.

ಲಂ: ನಮಸ್ಕಾರ.

(ಕೃಪೆ: ಬೆಂಗಳೂರು ಆಕಾಶವಾಣಿ)

●

## ಅನುತ್ತರ

ಇಂದು ಬೆಳ್ಳಂಬೆಳಿಗ್ಗೆ ;
ಹೊದಿಕೆಯೊಂದಿಗೆ,
ಕನಸ ಮಡಚುವ ಸಮಯ....
ಹೆದ್ದಾರಿ ಕಾವಲಲ್ಲೇ
ಕವಲಿಗಿಳಿಯುವ ಕಡವೆ ಕುಣಿತ....
ಮರು ಮಾತು ಬೆಡಗಿಲ್ಲದೇ
ಮಂದಾರ ಮೌನದ ಮೆಲುಕು...
ವಿರಳ ವಿಷಾದಕ್ಕೆ,
ಹೃದಯ ಲಾಂಛನಕ್ಕೆ,
ಹಗಲೂ-ಇರುಳೂ ಸಂಕ್ರಾಂತಿ....
ಕಾವಲಿಗೆ ಕಣ್ಣೊಡೆದು
ಹಿನ್ನುಡಿಗೆ ಅತ್ತಿತ್ತ
ಕುಸುರಿ ಕೆಲಸ ಮೂಡುತ್ತಾ,
ಮೋಡಿ ಹರಿದಾಡುವಾಗ
ಪ್ರಶ್ನೆ ಏಕೇ ?
ಎಷ್ಟು ಬೆಳೆದರೂ,
ಎಲ್ಲೆಲ್ಲಿ ನಿಂತು-ಕುಂತು
ಗೆಬರಿಕೊಂಡರೂ
ಹೃದಯ ಮೌನಕ್ಕಿನ್ನೂ
ಕನ್ನಡಿ ಬೇಕೇ ?
ಹಸಿರಸಿರ ಬೆಳಕಿಗೆ
ಉಸಿರುಸಿರ ಭಾವಕ್ಕೆ
ನಾ ಕಟೆಯುವಾಗ ಮುನ್ನ
ಬೇಲಿ ಬಿರುಕಲಿ ನುಗ್ಗಿ,
ಲಗ್ಗೆ ಹಾಕುವಾಗ ಬಿರುಸಿಗೆ
ಪ್ರಶ್ನೆ ಏಕೆ ?
ಇನ್ನೂ ಪ್ರಶ್ನೆ ಏಕೆ ?

—ಎಚ್. ಎಸ್. ಆರತಿ

---

ಎಚ್. ಎಸ್. ಆರತಿ, 1079, 5ನೇ ವಿಭಾಗ, ರಾಜಾಜಿನಗರ, ಬೆಂಗಳೂರು-560 010

# ಪಿತೃಗಳಿಗೆ

ಮಹಾನವಮಿ ಬಂದಾಗಲೆಲ್ಲ
ಬೆನ್ನು ಹತ್ತುವ ಪ್ರಶ್ನೆ—
ಸತ್ತವರು ನೀವಲ್ಲ
ನಾವು, ಕಿರಿಯರು ಎಂಬ ಒಂದೇ
ಅಪವಾದಕ್ಕೆ ನಮ್ಮನ್ನು ನೂಕಿದಿರೇಕೆ ?
ನಿಮ್ಮ ಕೂಳಿನ ಅಗುಳಿಗೆ ಹಕ್ಕುದಾರರಲ್ಲವೇನು ನಾವು ?
ಎಲ್ಲರ ಮನೆಯಲ್ಲಿಯು ತುಪ್ಪ-ವಡೆ ತಿಂದು
ಹೊಸಬಟ್ಟೆ ಉಟ್ಟು ಹೋದವರು ವರ್ಷವಿಡೀ
    ಸುಖನಿದ್ರೆ ಮಾಡುತ್ತೀರಿ !

ಮಲಗಿರೊ ನಿಮಗೆ ಮಹಾನವಮಿ.
ಈ ಕೆಂಡಗಳ ಮಧ್ಯೆ ಬೇಡಾಗಿ ಬದುಕಬೇಕಲ್ಲ
ಅರೆಬೆಂದ ರೊಟ್ಟಿಯಾಗಿ
ಹೆಂಚಿನ ಮೇಲೆ ಕಾಯಬೇಕಲ್ಲ
    ಸರದಿಗಾಗಿ !

ಈ ಒಂದೊಂದು ಕೆಂಡಕ್ಕೆ ಹುಟ್ಟಿದ ಪಿಂಡಗಳು
ಮೈಮೇಲೆ ಕೊರೆದ ಮೂಕ ಕಲೆಗಳ ಮುಟ್ಟಿಕೊಂಡಾಗೆಲ್ಲ
ಎದೆ ಗದ್ದಿಲು ಹಿಡಿದು ದಬರಿಯಾದಂತೆ—
ನಿಮ್ಮ ಗೊಬ್ಬರದ ಮೇಲೆ ಬದುಕಿದ್ದ ನಾವು
ಬೇರಿಗೆ ನೀರಿಳಿಸಿಕೊಂಡೂ ಬೆಳೆಯಲಾರೆವು.
ಗಾಳಿ ಬೀಸಿದ ಮೇಲೆ ಏಳಲಾರೆವು ಮತ್ತೆ
ಉಪ್ಪುನೀರಿನ ರಸವ ತಿಕ್ಕಿ ಒಪ್ಪ ಮಾಡುವವರೆಗೆ

    ಮಧ್ಯಾಹ್ನದ ಸೂರ್ಯನಾಗಿ
    ನೀರಿಗೆ ಬೀಳುವವರೆಗೆ
    ಇರುತ್ತೇವೆಯೇ—
    ಇದ್ದು—
    ನಿಮ್ಮ ಕೂಡ ಗೆದ್ದು ಬರುತ್ತೇವೆಯೇ ಅಥವಾ
    ನುಚ್ಚು ಮಂದರಿಯಲ್ಲಿ ಉಳಿಯುತ್ತೇವೆಯೇ ?

— ಬಿ. ಎಸ್. ನಾಗರತ್ನಕುಮಾರಿ

ಎಲ್. 65, ಕ್ವಾರ್ಟರ್ಸ್, ಮಾನಸಗಂಗೋತ್ರಿ, ಮೈಸೂರು-570 006

## ಹನಿಗವನಗಳು

೧

ಮುಂಜಾನೆ ಬಂದು
ಮಧ್ಯಾಹ್ನ ಅರಳಿ
ಸಂಜೆಗೆ ದಳದಳ
ಪಕಳೆ ಪಕಳೆಯಾಗಿ
ಉಚ್ಚಿ ನೆಲ ಕಚ್ಚಿ
ನರಳುವ ಹೂವಿನಂತೆ
ಬಾಲ್ಯ-ಯೌವ್ವನ-ಮುಪ್ಪು.

೨

ದುಂಬಿ ಹೂ ಮುತ್ತಿ
ಪಾತರಗಿತ್ತಿಯ ಪಕ್ಕ ಹಾರಿ
ನೀಲ ಮೇಘಗಳು ನಲಿದಾಡಿ
ಹಾಲ ಬೆಳದಿಂಗಳು ಹರಿದಾಗ
ನಿನ್ನ ನೆನಪ ನೋಟ ಬಿಚ್ಚಿ
ಯಾತನೆಯ ಮುಳ್ಳು ಚುಚ್ಚಿ
ಖಂಡಿತಾ ನೀ ನನ್ನಲ್ಲಿಳಿದು
ಸವಿ ನೆನಪ ಸೆರಗ
ಹಾಸುತ್ತಿ ಗೆಳೆಯಾ

೩

ನಿರ್ಜೀವ ಹಾಸಿಗೆಯಲಿ
ಮರಗಟ್ಟಿದ ಮೈಯೊಡ್ಡಿ
ಸತ್ತ ಕನಸುಗಳ
ಮತ್ತೆ ಮತ್ತೆ ಕೆಣಕುತ್ತ
ಕಪ್ಪುಗಟ್ಟಿದ ಕತ್ತಲೆಯಲಿ
ಕರಗಿ ಹೋಗುತ್ತಿದ್ದೇನೆ

— ಪ್ರೇಮಾಸಿರ್ಸೆ

ಪ್ರೇಮಾಸಿರ್ಸೆ, ಮನೆ ನಂ. 203, ನೌಬಾದ, ಬೀದರ್

# ಅನುಭಾವದ ಕಾಣ್ಕೆ: ಭುಜಂಗಯ್ಯನ ದಶಾವತಾರಗಳು

— **ಪೋಲಂಕಿ ರಾಮಮೂರ್ತಿ**

ಶ್ರೀಕೃಷ್ಣ ಆಲನಹಳ್ಳಿಯವರ **ಭುಜಂಗಯ್ಯನ ದಶಾವತಾರಗಳು** ಓದುತ್ತಿರುವಂತೆಯೇ ಬಿಚ್ಚಿಕೊಳ್ಳುವ ಅನುಭವ ಅನಾಯಾಸದ ಆನುಷಂಗಿಕ ಅನುಭಾವದ್ದು: ಪುಸ್ತಕದ ಪ್ರಾರಂಭದಲ್ಲೆ ಉದ್ಧರಿಸಿರುವ ಮಧುರ ಚೆನ್ನರ ಉಕ್ತಿ : 'ಕಣ್ಣು ಅರಳದ ಕೂಸು, ಮ್ಯಾಲೆ ಕತ್ತಲೆ ಗವಿಯು ಆಗಲ್ಲ ಕಂಡೆ ನಾನೀಗ'- ಎನ್ನುವ ಕಾಣ್ಕೆಯ ಕಂಡುಕೊಳ್ಳುವಿಕೆಯದು. ಇದೆಲ್ಲಾ ಸದ್ದಿಲ್ಲದೆ ನಡೆಯುವ ಆಗಂತುಕ ಅನುಭವ—ಅಷ್ಟೇ ಸಹಜ, ಅಷ್ಟೇ ವಾಸ್ತವ : ಅಷ್ಟೇ ನಿಬ್ಬೆರಗಿನ ಬೆರಳುಕಚ್ಚು.

ಪವಾಡವೇನೆಂದರೆ ಭುಜಂಗಯ್ಯನನ್ನ ನಾವೆಲ್ಲಾ ನೋಡಿದ್ದೀವಿ-ಆದರೆ ಬರಹಗಾರ ಕಂಡುಕೊಂಡಂತೆ ನಾವು ಕಂಡುಕೊಂಡಿದ್ದಿಲ್ಲ, ನಾವು ಕಂಡದ್ದಿಲ್ಲ. ನಾವು ನೋಡುತ್ತೇವೆ, ಕಾಣುವುದಿಲ್ಲ- ಅದಕ್ಕೆ ನಮಗೆ ನೋಡುವ ಅನುಭವವಷ್ಟೇ—ಕಾಣ್ಕೆಯ ಅನುಭಾವವಿಲ್ಲ.

ಹಾಗೆ ಕಂಡಿದ್ದಳು ಸುಶೀಲ-ಭುಜಂಗಯ್ಯನನ್ನ : ನಿಜಕ್ಕೂ ಹಾವಾಡಿಸುವ ಹಾವೇ (ಭುಜಂಗ—ಹಾವು) ಆದವನ, ಹಾಗೇ ಹಾವೇ ಆಗಿ ಪ್ರಿಯವಾದ, ನಿಜವಾದ ಪ್ರಿಯತಮನ (ಭುಜಂಗ—ಪ್ರಿಯಕರ) :

> ಹಾವು ಹಿಡಿದು ನಿಂತ ಭುಜಂಗಯ್ಯನನ್ನು ಸುಶೀಲ ದಿಟ್ಟಿಸಿದಳು. ಸ್ವಲ್ಪ ಕುಳ್ಳಾದರೂ ಕಟ್ಟುಮಸ್ತಾದ ಆಳು. ಈಗ ಹಾವು ಹಿಡಿದು ಮೋಡಿಮಾಡುವವನಂತೆ ಕಂಡರೂ ಅವನ ಮುಖದ ಭಾವ ಮಕ್ಕಳ ಹಾಗೆ ಮುಗ್ಧವಾಗಿತು. ತಮ್ಮನ್ನು ಕಂಡು ತಾನೇ ಹಾವನ್ನು ಹತ್ತಿರ ತಂದು ತೋರಿಸಿದ, ಬಾಯಿ ತೆಗೆದು ಅದರ ಕಚ್ಚುವ ಹಲ್ಲನ್ನು ತಾನು ಕಿತ್ತು ಹಾಕಿದ್ದು ಹೇಳಿ "ಹಾವಿನ ವಿಷದ ಕೊಳವೆ ಇದೆ ನೋಡಿ" ಎಂದಾಗ ಸುಶೀಲ ಬಗ್ಗಿ ಕುತೂಹಲದಿಂದ ನೋಡಿ

---

ಪ್ರೊ. ಪೋಲಂಕಿ ರಾಮಮೂರ್ತಿ, ಇಂಗ್ಲೀಷ್ ವಿಭಾಗ, ಮಾನಸಗಂಗೋತ್ರಿ, ಮೈಸೂರು-570006

ದಳು. ಅವಳಿಗೆ ಹಾವಿನ ನಾಲಿಗೆ ಕೂಡ ಕೊಳವೆಯಿದ್ದಂತೆಯೇ ಕಾಣಿಸಿ ಯಾವುದು ನಾಲಿಗೆ, ಯಾವುದು ವಿಷದಕೋಳವೆ ಅನ್ನುವ ಬಗ್ಗೆ ಖಚಿತವಾಗದೆ ಮತ್ತೆ ಭುಜಂಗಯ್ಯನನ್ನು ಕೇಳಿ ತಿಳಿದುಕೊಳ್ಳಬೇಕೆನಿಸಿವರೂ ಯಾಕೋ ನಾಚಿಕೆಯಾಗಿ ಕೇಳಿರಲಿಲ್ಲ. (ಪು.75).

ಭುಜಂಗಯ್ಯ ಸುಶೀಲಳನ್ನು ಕಂಡ ತಕ್ಷಣ ಅವಕ್ಕಾದ. ಸುಶೀಲಳ ಅಗಲವಾದ ಕಣ್ಣುಗಳು, ಮೋಹಕವಾದ ಮೈಮಾಟ ಭುಜಂಗಯ್ಯನನ್ನು ಮೊದಲ ಸಲವೇ ಅಲ್ಲಾಡಿಸಿಬಿಟ್ಟವು. ಹಾವನ್ನು ಕಂಡು ಭಯಗೊಂಡರೂ ಸುಶೀಲ ತಡೆಯಲಾಗದ ಕುತೂಹಲದಿಂದ ಅದನ್ನು ಸಮೀಪಿಸಿ ನೋಡುವಾಗ ಭುಜಂಗಯ್ಯನ ಮೈ ಕ್ಷಣ ಜುಮ್ಮೆಂದಿತ್ತು. ಸುಶೀಲಳನ್ನು ಹಾವು ಮುಟ್ಟಿ ನೋಡುವಂತೆ ಹೇಳುವ ಮನಸ್ಸಾದರೂ ಯಾಕೋ ಸಂಕೋಚಪಟ್ಟು ಹೇಳಲಿಲ್ಲ. (ಪು.76)

ಮತ್ತೆ ತಾನು ಎಷ್ಟು ಬಗೆಯ ಹಾವುಗಳನ್ನು ಹಿಡಿದೆ, ಎಷ್ಟು ಜನ ಹಾವು ಕಚ್ಚಿದವರನ್ನು ಬದುಕಿಸಿದೆ—ಇತ್ಯಾದಿ ತನ್ನ ಸಾಹಸೋಪಾಖ್ಯಾನಕ್ಕೂ ತೊಡಗಿದ. ಸುಶೀಲ ತುಂಬಾ ತನ್ಮಯತೆಯಿಂದ ಕೇಳುತ್ತ ಭುಜಂಗಯ್ಯ ಹೇಳುವ ಧಾಟಿಗೆ ಬೆರಗಾದಳು. (ಪು.78)

ಸುಶೀಲ ಭುಜಂಗಯ್ಯನನ್ನ 'ದಿಟ್ಟಿಸಿದಳು' ; ಅವನ 'ಮೋಡಿ'ಗಿಂತಲೂ ಅವನ ಮುಗ್ಧತೆಗೆ 'ಹತ್ತಿರ'ವಾದಳು ; ಅವನೇ ಆಗಿದ್ದ 'ಹಾವಿನ' ಒಳ–ಹೊರಗನ್ನ ನಾಲಿಗೆ ನಾಳಗಳನ್ನ ಕುತೂಹಲದಿಂದ ನೋಡಿದಳು : ಹಾಗೆಯೇ ಭುಜಂಗಯ್ಯನೂ ಅವಳನ್ನು ಕಂಡು 'ಅವಕ್ಕಾದ' ; ಅವಳ 'ಮೈಮಾಟ'ಕ್ಕೆ 'ಅಲ್ಲಾಡಿಬಿಟ್ಟ : ಅವಳು 'ಸಮೀಪಿಸಿ' ದಂತೆ ಅವನ 'ಮೈ ಜುಂ' ಎಂದಿತು ! ಅವಳೂ ಅವನಲ್ಲಿ 'ತನ್ಮಯ'ಳಾದಳು.

ಭುಜಂಗಯ್ಯ ಪ್ರೇಮವೇ ಚಿಲುಮೆಯಾಗಿ ಚಿಮ್ಮುತ್ತಲೇ ಬಾಳಿ, ಚಿಮ್ಮುತ್ತಲೇ ಬೆಳೆದು ಬೆಳಗಿದವನು—ಬಾಯಿಂದ ರಕ್ತ—ವಿಷಗಳನ್ನು ಚಿಮ್ಮುತ್ತಲೇ ಪ್ರೇಮದಲ್ಲಿ ಸತ್ತವನು : ವಿಷದಲ್ಲಿ ಕಚ್ಚಿದ ಹಾವನ್ನೂ ಒಮ್ಮೆಯೂ ಮುತ್ತಿಟ್ಟವನು-ಸಂತನಾಗಿ ಅಲ್ಲ : ಸಾಮಾನ್ಯನಾಗಿ ;

ಕಣ್ಣು ಕಳಕೊಂಡು ಕಗ್ಗತ್ತಲೆಯಲ್ಲಿ ಅವನು ಬೆಳಗಿದ ಹಣತೆಯ ದೀಪದ ಬೆಚ್ಚನೆ ಬೆಳಕು ಎಷ್ಟು ಕರುಳು ಕೀಳುವ ಆರ್ದ್ರತೆಯದು, ಅಂತಃಕರಣದ್ದು ;

ಅವನು ಪಾತಾಳದಿಂದ ಚಾರಿಗೆಡೆದು, ರಕ್ತನಾಳದಿಂದ ವಿಷ ಹೀರಿ ಹೀಗೆ ಎಲ್ಲಾ ಜನರನ್ನ, ಜಾತಿಯವರನ್ನ, ತನ್ನ ಕಾಯಕದಲ್ಲಿ ತಬ್ಬಿದ್ದನೋ, ಅದಕ್ಕಿಂತ ಮಿಗಿಲಾಗಿ

ತಾನು ಕಣ್ಣು ಕಳಕೊಂಡಾಗಲೂ, ಊರೂರು ತಿರುಗುವ ದೀನದಲಿತರ ಆಶಯುಗಳ, ಸಾಂತ್ವನದ ಬಂಧುವಾಗಿ ಲೋಕವನ್ನೇ ತಬ್ಬಿದವನು—ಅನ್ನಕ್ಕಿಂತಲೂ ಹೆಚ್ಚು ಸಾಂತ್ವನ ನೀಡುವ ಭಕ್ತಿಯಲ್ಲಿ, ಅವನ ಕಾಯಕವಾದ ಹಾಡಿನಲ್ಲಿ, ಜಂಗಮದ ಅಲೆತದಲ್ಲಿ.

ಆ ಕಾಯಕದಲ್ಲೇ ಅವನು ವಿಷದ ಸಾವನ್ನು ತಬ್ಬುವಂತೆಯೇ ಸುಶೀಲೆಯೂ ಬಳೆ ಮಾರುವ ಕಾಯಕದಲ್ಲೇ ಭ್ರಷ್ಟತೆಯ ಸಾವನ್ನೂ ಅಪ್ಪುವುದು.

"ಸುಶೀ" ಭುಜಂಗಯ್ಯನ ಒಲುಮೆಯ ಉಸಿರು—ನಿಟ್ಟುಸುರಿನ ದಾರುಣತೆಯ ಸುಯ್ಲು. ಒಲುಮೆಯಾಗಿ ಚಿಮ್ಮುವಂತೇನೇ, ಅದು 'ಅಯ್ಯೋ' ಎನ್ನುವ ದುಃಖದ ಸುಯ್ಲು ಆಗಿರುವುದು, ಆ ಹತಭಾಗಿನಿಯ ನಿಸ್ಸಹಾಯಕತೆಗೆ ಮಿಡಿದ ಕರುಳಿನಕೂಗೂ ಬಸುರಿನ ನಿಟ್ಟುಸಿರೂ ಆಗಿರುವುದು ಈ ಕತೆಯ ಮಮ್ಮಲ ಮರುಗು.

ಕಣ್ಣು ಕಳಕೊಂಡ ಭುಜಂಗಯ್ಯ ಸುಶೀಲೆಯನ್ನ ಕಂಡುಕೊಂಡದ್ದು, ಸುಶೀಲೆಯೂ ತನ್ನ ಗುಡನನ್ನ ಪಡಕೊಂಡದ್ದೂ - ಅವರಿಬ್ಬರೂ ಒಬ್ಬರೊಬ್ಬರಿಗೆ ಮಗುವಾಗುವುದು ಸುಶೀಲೆ 'ಹಣೆಯ ಮೇಲೆ ಕೈಯಿಟ್ಟು' ತಾಯಿಯಂತೆ 'ನೇವರಿಸುವುದು' ; ಭುಜಂಗಯ್ಯನೂ ಅವಳನ್ನು ತೆಕ್ಕೆಗೆ ಬೆರೆಸಿಕೊಂಡು ಒಂದಾಗುವುದು 'ಸುಶೀಲ ತಾನಾಗಿಯೇ ಗಂಡನ ಬೆತ್ತಲೆಯಲ್ಲಿ ಇನ್ನೊಮ್ಮೆ ಬೆಸೆದು, ಬರಿಯ ಮೈಯಷ್ಟೇ ಅಲ್ಲ, ಹರಿವ ರಕ್ತವೂ ಒಂದಾಗಿ' (459) ಸಿಕೊಳ್ಳುವುದು : ಪರಸ್ಪರ ಸಾಂತ್ವನದಲ್ಲಿ ಕೂಡುವುದು. ವಯಸ್ಸಿನಿಂದ ಹಿರಿಯನಾದವನಿಗೆ ಸುಶೀಲೆಯೇ ಮಗಳಲ್ಲವೆ ?- ಹಾಗೆಯೇ ಅವಳು ತಾಯಾಗಿ ತಬ್ಬಿದರೆ, ಇವನು ತಂದೆಯಾಗಿ ಅಪ್ಪುವುದೂ ಕೂಡ. (ಹೆಂಡತಿಯನ್ನ ಒಂದು ಪುಟ್ಟ ಮಗುವೇನೋ ಅನ್ನುವಂತೆ ಮೃದುವಾಗಿ ಎತ್ತಿ ಎದೆಗೊತ್ತಿಕೊಂಡು, ಮೃದುವಾಗಿ ಮೈ ತಡವುತ್ತಾ ಸಂತೈಸಿದ) (507).- ಪರಸ್ಪರ ವಾತ್ಸಲ್ಯದಲ್ಲಿ : ಹೀಗೆ ಪ್ರೇಮದಲ್ಲಿ ಮುಗ್ಧರಾದ, ಪಾಪವಳಿದ ಕಂದಗಳು- ಈ ಪ್ರೇಮಿಗಳು.

ಈ ಪ್ರೇಮದ ಆರ್ದ್ರತೆ ಹೇಗೆ ಈ ಪ್ರೇಮಿಗಳನ್ನು ದುಃಖದ ಆರ್ತತೆಯಲ್ಲಿ ಒಂದಾಗಿಸುತ್ತದೆ ಎನ್ನುವ ದಾರುಣತೆ ಹೇಗೆ ಇಲ್ಲಿ ಹೊಮ್ಮುತ್ತದೆ ಈ ಚಿತ್ರದಲ್ಲಿ.

> 'ಹಣೆಯ ಮೇಲೆ ತಾನಿಟ್ಟದ್ದ ಕೈ ಯಾಕೋ ತೇವಗೊಂಡಂತಾಯಿತು. **ಅದು ತನ್ನ ಕೈ ಬೆವರೋ ಇಲ್ಲ ಗಂಡನ ಹಣೆಯ ಬೆವರೋ, ಸುಶೀಲಳಿಗೆ ತಿಳಿಯಲಿಲ್ಲ' (452).**

ಯಾರ ಬೆವರಿದು ?– ಎರಡೂ ಬಾಳೂ ಬೆಂದ ಬಿಸಿ ಹಬೆಯಲ್ಲವೆ ?- ಈ ಬೆವರಲ್ಲೇ ಒಂದಾದ ಹಣೆ ಕೈಗಳಲ್ಲವೇ ?- ಇದು ಹಣೆ ಬರಹದ ಬೇಗುದಿಯಂತೆಯೇ,

ಕಾಯಕದ ಕೈಕುದಿಯೂ ಅಲ್ಲವೆ ?– ತಂದೆ-ಮಗಳ ಹಾಗೂ ತಾಯಿ-ಮಗನ ಪ್ರೇಮ ವಾತ್ಸಲ್ಯಗಳ ಬೆವರು ಬೆರೆತವಲ್ಲವೆ ? ಮೈ ಬೆಚ್ಚನೆಯು ಬೆಸುಗೆಯಲ್ಲವೆ ?

ಅದೀಗ ಪ್ರೇಮಿಗಳು ಒಂದಾದ ಅಮೃತ ಮುಹೂರ್ತ : ಒಲುಮೆಯ ಬೆಚ್ಚನೆಯಲ್ಲಿ, ದುಃಖದಬೇಗೆಯಲ್ಲಿ : ಬೆವರಿನಲ್ಲಿ.

ಹಾಗಾಗಿ ("ಎಲ್ಲೋ ಇವನ ಕಾಲಿಗೂ ಕಣ್ಣಿರಬೇಕು") ಕಣ್ಣಿಲ್ಲದವನ ಕಾಲಿಗೆ ಕಾಯಕದ ಕಣ್ಣು ಬರುತ್ತದೆ, ಕಾಲಿಲ್ಲದವಳ ಕಣ್ಣಿಗೆ ಕಾಲು ಬರುತ್ತದೆ: ಇಬ್ಬರೂ ಪ್ರೇಮಿಗಳ ಪ್ರೇಮ ದೇಹ ಪಡೆದುಕೊಳ್ಳುತ್ತದೆ, ಕಾಯಕದ ಚೇತನದಲ್ಲಿ ಚಿಮ್ಮುತ್ತದೆ, ಬೆಳೆಯುತ್ತದೆ.

ಅದೀಗ ಈ ಕಥೆಯ ಪವಾಡ : ಪ್ರೇಮಿಗಳು ಪ್ರೇಮವನ್ನು ಕಂಡುಕೊಂಡು ಹೊಸ ಜನ್ಮ ಪಡೆಯುವುದು. ಹೊಸ ದೇಹದಲ್ಲಿ ಚೇತನಶೀಲರಾಗುವುದು—ಬಾಳಿನ ಪರಮ ಸತ್ಯವಾದ ಕಾಯಕದ ಸಾಕ್ಷಾತ್ಕರಣ ಪಡಕೊಳ್ಳುವುದು ; ಭುಜಂಗಯ್ಯನ ಬಾಳು ಸಾರ್ಥಕವಾಗುವುದು.

ಆದರೆ, ಈ ಅಮಾಯಕ ಪ್ರೇಮಿಗಳು ಪಡುವ ಬವಣೆಗೆ, ಕೊನೆಗೆ ಹೊಂದುವ ದುರಂತಕ್ಕೆ ಕಾರಣ - ಅವರ ಪ್ರೇಮಕ್ಕೆ ಬೆನ್ನು ಹತ್ತಿರುವ ಹಾವು, ಅವರು ಅವರ ಒಲುಮೆಗೆ ತಮ್ಮ ಮುಗ್ಧತೆಯಿಂದಲೇ, ತಮಗೆ ತಾವೇ ಅಂಟಿಸಿಕೊಂಡ ಹಾವಿನ ಕಾಟ. ಸ್ಥೂಲವಾಗಿ ನೋಡುವುದಾದರೆ ಭುಜಂಗಯ್ಯನ ದಶಾವತಾರ, ಹಾವಯ್ಯನ ದಶಾವತಾರ–ಹಾವಿನ ಹತ್ತು ಕಾಟ. ಇದು ಹತ್ತಿರ ಸಂಬಂಧಿಗಳೊಂದಿಗೆ ಅನಿವಾರ್ಯವಾಗಿ ಅನುಭವಿಸಿದ ಲೈಂಗಿಕ ಸುಖದಿಂದ ಬಂದ ಪ್ರಭೇದದಿಂದುಂಟಾದ, ಪಾಪ ಪ್ರಜ್ಞೆಯ ಕಾಡಾಟ.

ಭುಜಂಗಯ್ಯ ತಾಯಿಯಂತಿರುವ ಉಣಿಸಿ ತಿನಿಸಿದ ಹೆಂಗಸನ್ನು ಮೈಸೂರಿನಲ್ಲಿ ಕೂಡಿದಂತೆ.[1] ತಾನು ಮಗಳ ವಯಸ್ಸಿನ ಸುಶೀಲೆಯನ್ನು (ಅವಳ ತಂದೆ, ಮಗಳು ತನಗೆ ಹುಟ್ಟಿದವಳೇ ಅಲ್ಲ ಎಂದು ಮರೆತು ಬಿಡುವಷ್ಟರ ಮಟ್ಟಿನ ಅನಾಚಾರದ್ದು.) ಕೂಡಿದ್ದೂ ಕೂಡಾ ; ಹಾಗೆಯೇ ಸುಶೀಲೆ ತಮ್ಮನಂತಿರುವ ರಾಜನೊಂದಿಗೆ ಗುಪ್ತವಾಗಿ, ಲೈಂಗಿಕ ಸಾಂತ್ವನ ಪಡಕೊಂಡದ್ದು.[2] —ಆ ಪಾಪದ "ಹಾವು" ಅವಳನ್ನೂ, ಭುಜಂಗಯ್ಯನ ಪಾಪದ ಹಾವು ಅವನನ್ನೂ ಕಾಡುವಂತ, ಕಾಡುವುದು.

1. ಅವತ್ತೊಂದು ದಿನ ಬಚ್ಚಲ ಮನೆಯಲ್ಲಿ ಅವಳ ಗದಗುಡುವ ಕೆಂಪನೆ ತೊಡೆಗಳನ್ನು ಕಂಡಿದ್ದೆ. ನನ್ನ ಇಂದ್ರಿಯಗಳೆಲ್ಲ ತತ್ತರಿಸಿ ಹೋಗಿದ್ದವು. ಆ ಕ್ಷಣದಿಂದ ಅವಳನ್ನು ದಿಟ್ಟಿಸಿ ನೋಡಲು ಭಯ, ಏನೋ ತಪ್ಪು ಮಾಡುತ್ತಿರುವ

ಅಳುಕು. ಘೋರ ಪಾಪದ ಭಯ? ಆಕೆ ತನಗೆ ಅನ್ನ ಹಾಕುವ ಒಡತಿ. ತನ್ನ ಅವ್ವನಂತೆಯೇ ಕಾಣಬೇಕು. ತಾನೆಂಥ ಪಾಪಿ? ತನಗೇಕೆ ಇಂಥ ಬಯಕೆ ಆಯಿತು? ಇಲ್ಲ ಇಲ್ಲ ಅದು ತನ್ನ ತಪ್ಪಲ್ಲವೇ ಅಲ್ಲ. ಆಕೆಯೇ ತನ್ನನ್ನು ಮುಳುಗಿಸಿ ಬಿಟ್ಟಳು. ತನಗೂ ಪ್ರಾಯ ಮೂಡುತ್ತಿದ್ದ ಕಾಲ. ನೆಲ ಗುದ್ದಿ ನೀರು ತೆಗೆವ ತವಕ. ಎಷ್ಟೆಷ್ಟು ಸಲ ಇಂಥ ಪಾಪಕ್ಕೆ ಇನ್ನೊಮ್ಮೆ ಒಳಗಾಗ ಬಾರದೆಂದುಕೊಂಡರೂ, ಭಾವನೆ ಕಾಡಿದಾಗಲೆಲ್ಲ ಅವನು ನೆನಪು ಮಾಡಿ ಕೊಂಡರೂ ಅವಳು ಕೊಂಚ ಮುಟ್ಟುವುದೇ ತಡ ಅವಳ ಬೆಚ್ಚನೆಯ ಮಾಂಸ ಖಂಡಗಳಲ್ಲಿ ಕರಗಿ ಬಿಡುತ್ತದೆ. ಆಗ ತನ್ನನ್ನು ಯಾವುದೇ ಭಯ, ನಾಚಿಕೆ ಕಿಂಚಿತ್ತೂ ಕಾಡಲಿಲ್ಲ. ತನ್ನ ಕಪ್ಪನೆಯ ಕಬ್ಬಿಣದಂಥ ಮೈ ಅವಳ ಪಾಲಿಗ ಕಡಗೋಲಾಗಿ ಬಿಡುತ್ತಿತ್ತು. ಓ ತನಗೆಂಥ ಸುಖ ಅನ್ನಿಸಿತ್ತು? (ಪು. 446-47)

2. ಸುಶೀಲಳೇ ಎದ್ದು "ಎಂಥಾ ಪುಕ್ಕಲೊ ನೀನು. ಅದೆಂಗೆ ಒಬ್ನೇ ಇರ್ತಿಯೋ ಕಾಣೆ" ಅನ್ನುತ್ತ ಬಾಗಿಲು ಮುಚ್ಚಿ ಕೂತಿದ್ದ ರಾಜನನ್ನು ಹತ್ತಿರಕ್ಕೆಳೆದುಕೊಂಡು ಮಗುವಿನ ಹಾಗೆ ಅವನ ಮೈ ಮೇಲೆ ತೋಳಿಟ್ಟು ಮೆಲ್ಲಗೆ ತಟ್ಟುತ್ತ ಮಲಗಿದಳು. ಅವಳಿಗೆ ಯಾವುದೇ ಕಿರಿಕಿರಿಯೂ ಆಗಲಿಲ್ಲ. ರಾಜನ ಮುಖ ಅವಳ ಸ್ತನ ಗಳಿಗೆ ಒತ್ತಿಕೊಂಡಿತ್ತು. ಅವನು ಮಾತ್ರ ಕುಲುಮೆಯೊಳಗೆ ಬಿದ್ದಂತಾಗಿದ್ದ. ಅವನ ಕಾದು ಕುದಿಯುತ್ತಿದ್ದ ಉಸಿರಿನ ಬಿಸಿ ಸುಶೀಲಳನ್ನು ತಟ್ಟಲಿಲ್ಲ. ಅವಳ ಪಾಲಿಗೆ ಅವನು ಮಗುವಾಗಿಯೇ ಇದ್ದ. ಆದರೆ ಅವನ ಪುಟ್ಟ ಮೈ ಯೊಳಗೂ ಒಂದು ದುಷ್ಟ ಜಂತು ಕೈಕಾಲುಗಳನ್ನು ಆಡಿಸುತ್ತಿರುವುದು ಅವಳಿಗೆ ಅರಿವಾಗಲಿಲ್ಲ. ಗುಡುಗು ಮಿಂಚಿನ ಜೊತೆಗೆ ಮಳೆ ಸುರಿಯತೊಡಗಿತ್ತು. ರಾಜ ಇನ್ನಷ್ಟು ಭಯಗೊಂಡವನಂತೆ ನಡುಗಿದ. ಸುಶೀಲ ಅವನನ್ನು ತನ್ನೊ ಳಗೇ ಹುದುಗಿಸಿಕೊಳ್ಳುವಂತೆ ಅಪ್ಪಿಕೊಂಡಳು. ಅವನು ನಡುಗುತ್ತಿದ್ದುದು ಗುಡುಗು ಸಿಡಿಲಿನ ಭಯಕ್ಕೆಂದೇ ತಿಳಿದು ಅವನ ಭಯವನ್ನು ದೂಡುವಳಂತೆ ರಮಿಸತೊಡಗಿದಳು. ರಾಜನಿಗೆ ಅವಳ ಪ್ರತಿಯೊಂದು ಕ್ರಿಯೆಯೂ ಮತ್ತೆ ಮತ್ತೆ ಕಾವುಕೊಟ್ಟು ಹಿಂಸಿಸುತ್ತಿದ್ದವು. ನಡುವೆ ಏನೋ ತಣ್ಣನೆ ಹರಿದಂತಾಗಿ ಎಚ್ಚರವಾದಾಗ ರಾಜ ಗಾಢನಿದ್ರೆಯಲ್ಲಿ ಮುಳುಗಿದ್ದ. ಆದರೆ ಅವನ ಕೈ ತನ್ನ ಸೀರೆ ಸರಿದಿದ್ದ ಬೆತ್ತಲೆ ತೊಡೆ ನಡುವೆ ಇದ್ದುದನ್ನು ಗಮನಿಸಿ ತಟ್ಟನೆ ಅಲ್ಲಿಂದ ತೆಗೆದು ಸೀರೆ ಕೆಳಗೆಳೆದುಕೊಂಡಳು. ಕ್ಷಣ ಅವಳ ಮನಸ್ಸಿನಲ್ಲೂ ಕಸಿವಿಸಿ ಯಾಯಿತು. ಏನೋ ಅನುಮಾನ ಕುಟುಕಿತು. (ಪು. 294-95)

ಆ ಕಾಟದ ಹಾವೇ ಅವಳನ್ನು ಭುಜಂಗಯ್ಯನ ಹಾವಾಟದ 'ಮೋಡಿ' ಯಲ್ಲಿ ಹಾವಾಗಿ ಕಾಡಿ, ತನ್ನ ತಂದೆಯಂತಿರುವವನನ್ನು ಕೂಡುವಂತೆ ಮಾಡುವುದು:

ಹಾಗೆಯೇ ಭುಜಂಗಯ್ಯನನ್ನೂ ತನ್ನ ತಾಯಿಯಂತೆ ಇದ್ದವಳನ್ನ ಕೂಡಿದ 'ತಾಯ್ಗಂಡ' ತನಕ್ಕೆ ತನ್ನನ್ನೂ ಕಾಡುತ್ತಾ ತನ್ನ ಮಗಳಂತಹವಳನ್ನ ಕೂಡುವಂತೆ ಮಾಡಿದ್ದು".

ಅದಕ್ಕೇ ಭುಜಂಗಯ್ಯ ಹಾವನ್ನು ಬೇಟೆಯಾಡುತ್ತಾ, ಕಚ್ಚಿದ ಹಾವನ್ನೆಲ್ಲಾ 'ಕಚ್ಚಿ' (ವಿಷ ತೆಗೆಯುವುದಕ್ಕೆ ಕಾಲು ಕಚ್ಚುವುದು ವಿಷದ ಹಾವು ಕಚ್ಚುವುದು) ಹಾಕುತ್ತಾ, ಹಾವಾಡಿಗ, ಹಾವಿನ ಬೇಟೆಗಾರ ಆಗುವುದು. ಕೊನೆಗೆ ಅವನನ್ನ ಆಗಾಗ ಕಚ್ಚಿ ಕಚ್ಚಿ ಕಾಡುತ್ತಿದ್ದ ಹಾವನ್ನ, ಅವನೂ ಕಚ್ಚಿ ಕಚ್ಚಿ ಹಾಕುತ್ತಾ ಕಡೆಗೆ ಪ್ರಭಲವಾದ ಹಾವಿನಿಂದ ಕಚ್ಚಿಸಿಕೊಂಡೇ ಸಾಯುವುದು.

ಹಾಗೆಯೇ ಸುಶೀಲೆ ತನ್ನ ರಾಜನೊಂದಿಗೆ ಇನ್‌ಸೆಸ್ಟಿನ ಹಾವಿನೊಂದಿಗೆ ಹೋರಾಡುತ್ತಾ, ಕೊನೆಗೆ ನಾರಾಯಣನಲ್ಲಿ ಹಾವಾಗಿ ಕಚ್ಚಿಸಿಕೊಂಡು ಭ್ರಷ್ಟತೆಯಲ್ಲಿ ಸಾಯುವುದು—ಗಂಡನ ಹಾವಿನ ಕಡಿತದಲ್ಲೇ ತನ್ನ ವೈಧವ್ಯದ ಕಡಿತವನ್ನೂ ಅನುಭವಿಸುವುದು. (ನಾರಾಯಣ ಅವಳ ಮೇಲೆ ಎರಗುವುದಕ್ಕೆ ಅವಳು ಅಡ್ಡ ಹಾದಿಯಲ್ಲಿ, ಹಾವು 'ಹಾವರಾಣಿ'ಗಳ ಭಯಕ್ಕೆ ಮುನ್ಸೂಚಿಯಾಗಿ ಹೆದರುತ್ತಾಳೆ, ಹಾಗಿರುವ ಸ್ಥಿತಿಯಲ್ಲಿ, ಹಾವು ಹರಿದಂತೆ ಸಾಗಿದ್ದ ಕಾಲು ಹಾದಿಯಲ್ಲಿ (505) ನಾರಾಯಣ ಹಾವಾಗಿ ಅವಳ ಮೇಲೆ ಎರಗಿ, ಕಚ್ಚಿಬಿಡುತ್ತಾನೆ—ನಾರಾಯಣ ತನ್ನನ್ನು ಇಡಿಯಾಗಿ ಕಚ್ಚಿ ಕಚ್ಚಿ ತಿಂದಿದ್ದ. (506)

ಒಂದು ರೀತಿಯಲ್ಲಿ ಈ ಕಥೆ ಲೈಂಗಿಕತೆಯಿಂದ, ಲೈಂಗಿಕತೆಯ ಬಗ್ಗಡದಿಂದ, ತಿಳಿದ ಪ್ರೇಮದ ತಿಳಿನೀರು—ಹಾವಿಗೆ ಕೊನೆಗೆ ಪ್ರಾಣ ತೆತ್ತು ಪ್ರೇಮ ಉಳಿಸಿಕೊಂಡವರ ಕಣ್ಣೀರು.

ಅದು ಸ್ಥೂಲವಾದ ಕಥೆಯ ನೋಟ : ಆದರೆ ಸೂಕ್ಷ್ಮವಾದ ಕಥೆಯ ಕಾಣ್ಕೆ ಯಾವುದೆಂದರೆ—ಹೇಗೆ ಇಬ್ಬರು ಅನನ್ಯ ಜೀವ ಪ್ರೇಮಿಗಳು, ಜೀವ ಜಂತುಗಳನ್ನ ಗಿಡ ಪಸಿಗಳನ್ನ, ಪ್ರಕೃತಿಯನ್ನ ಪ್ರೀತಿಸುವ ಅವ್ಯಾಜ ಪ್ರೇಮಿಗಳು, ಮಾನವತೆಯ ಚಿಲುಮೆಗಳು ಪ್ರೇಮದಲ್ಲಿ ಹಬ್ಬುತ್ತಾ, ತಬ್ಬುತ್ತಾ ಬೆಳೆಯುತ್ತಿರುವ ಅನಾಮಿಕ ವಿಶ್ವ ಪ್ರೇಮಿಗಳು, ವಿಶ್ವಬಂಧುಗಳು—ಸದ್ದಿಲ್ಲದೆ ಸಂತರಾಗಿರುವ ಸಾಮಾನ್ಯರು ಎಂಬುದು : ಹೇಗೆ ತಾಯಿ ಅಥವಾ ತಂದೆಯನ್ನ ಕಳೆದುಕೊಂಡ ತಬ್ಬಲಿಗಳು ತಾಯಿತಂದೆಗಳಾಗಿ ಎಲ್ಲಾ ತಬ್ಬಲಿಗಳನ್ನು ತಬ್ಬಿಕೊಂಡವರು, ವಿಶ್ವ ಕುಟುಂಬಗಳಾದವರು ಎಂಬುದು.

ಕಥೆಯ ಒಡಲಾಳ ಭುಜಂಗಯ್ಯ ಮಕ್ಕಳಿದ್ದೂ ಮಕ್ಕಳನ್ನ ಕಳಕೊಳ್ಳುವ ಮಮ್ಮಲ ಮರುಗು ; ಸುಶೀಲ ಹೆತ್ತು ಬಸಿರನ್ನು ಕಳೆದುಕೊಳ್ಳುವ, ರಾಜನನ್ನು ಮಗುವಿನಂತೆ, ತಮ್ಮನಂತೆ ಮಾಡಿಕೊಳ್ಳುವ ತಾಯ್ತನದ ನೋವು, ತುಡಿತ : ಅದಕ್ಕಿಂತಲೂ

ಇಬ್ಬರೂ ಒಬ್ಬರಿಗೊಬ್ಬರು ಪರಸ್ಪರ ಮಗುವಾಗುವುದು, ತಬ್ಬುವುದು, ವಾತ್ಸಲ್ಯದಲ್ಲಿ ಬೆರಳು ನೇವರಿಸುವುದು, ಹೊಟ್ಟೆಯ ಮೇಲೆ ಮುತ್ತಿಡುವುದು, ತೋಳು ಬಳಸುವುದು-ಸ್ಪರ್ಶ, ಗಂಧಗಳಲ್ಲಿ ಬೆಚ್ಚನೆ-ಬೆವರುಗಳಲ್ಲಿ ಬೆರೆಯುವುದು: ವಾತ್ಸಲ್ಯದಲ್ಲಿ ಪರಸ್ಪರ ಕರಗಿ ಹೋಗುವುದು-ಆ ವಾತ್ಸಲ್ಯದಲ್ಲಿ ಮಾದಳ್ಳಿಯಿಂದ ಮೈಸೂರಿನವರೆಗೆ ಸುತ್ತಿಡ ಬಲದ ಹಳ್ಳಿಗಳನ್ನೊಳಗೊಂಡು (ಬಳೆ ತೊಡಿಸುವ ಸೌಭಾಗ್ಯದಿಂದಲೋ, ಭಕ್ತಿ ಪದಗಳ ತಂಬೂರಿಯ ಝೇಂಕಾರದಿಂದಲೋ) ಒಂದಾಗುವುದು.

ಕಥೆ ಪ್ರೇಮದ್ದಾದರೂ ಅದರ ಮಾಧ್ಯಮ ನವುರಾದ ವಾತ್ಸಲ್ಯವಾಗಿರುವುದು Passion ಆಗುವುದಕ್ಕಿಂತ tenderness ಆಗಿರುವುದರಿಂದ, ಈ ಆರ್ದ್ರತೆಯಿಂದಾಗಿ ಅನನ್ಯವಾದ ಪ್ರೇಮ ಕಥೆಯಾಗಿರುವುದು: ಈ ದಿಕ್ಕಿನಲ್ಲಿ ಕನ್ನಡದಲ್ಲಿ ಮೊಟ್ಟ ಮೊದಲಿನ ಹೊಚ್ಚ ಹೊಸತಿನ ಸೋಪಜ್ಞೆಯದು. ಅಮಾಯಕದ ಪ್ರೌಢ ಪ್ರೇಮಿಗಳಿಬ್ಬರು, ಮುಗ್ಧತೆಯ ಪಾವಿತ್ರ್ಯದಲ್ಲಿ ಒಬ್ಬರನ್ನೊಬ್ಬರು ಹೆತ್ತುಕೊಳ್ಳುವುದು ಕಂದಮ್ಮಗಳಾಗಿ ಒಬ್ಬರನ್ನೊಬ್ಬರು ತಬ್ಬಿಕೊಳ್ಳುವುದು ಅಪೂರ್ವವಾದ ಸಾಹಿತ್ಯಕ ಸಾಧನೆ—ಸಿದ್ಧಿ: ಅದಕ್ಕೇ ಆ ಪ್ರೇಮಕಂದಗಳ ಮುಗ್ಧತೆಯೇ ಅಮಾಯಕತೆಯೇ. ಅಸಹಾಯಕತೆಯ ದಾರುಣತೆಯದು ಕೂಡಾ, ಕರುಳು ಕುಯ್ಯುವ ಆರ್ತತೆ-ಆದ್ರತೆಯದು ಕೂಡಾ:

> ರಾತ್ರಿ ಮಲಗುವಾಗ ಸುಶೀಲ ತಲೆ ದಿಂಬಿನ ಸಮೀಪವೇ ದೀಪ ಇಟ್ಟಳು. ಗಂಡನ ಗುಡ್ಡೆಗಳಿಲ್ಲದ ಕಣ್ಣುಗಳಲ್ಲಿ ನೀರು ತುಂಬಿಕೊಂಡಿರುವುದನ್ನು ಕಂಡು ಕ್ಷಣ ಕಂಪಿಸಿದಳು. ತನ್ನ ಸೀರೆ ಸೆರಗಿನಿಂದ ಅವನ್ನು ಒರೆಸುತ್ತಾ "ಯಾಕೆ" ಅಂದಳು. ಭುಜಂಗಯ್ಯ ಮಾತಾಡಲಿಲ್ಲ. ಕೊಂಚ ಗಾಬರಿಯಿಂದ "ಏನು ಏನಾಯ್ತು" ಅನ್ನುತ್ತ ತನ್ನ ಮುಖವನ್ನು ಗಂಡನ ಮುಖದ ಸಮೀಪ ತಂದಳು. ಅವಳ ಬೆಚ್ಚಗಿನ ಉಸಿರು ಅವನನ್ನು ಮೃದುವಾಗಿ ತಟ್ಟಿತು. ತುಟಿಗಳೇಕೋ ನಡುಗುತ್ತಿದ್ದಂತೆ ತೋರಿತು. ಅದುಮಿಟ್ಟುಕೊಂಡ ವೇದನೆಯನ್ನು ಹೊರಗೆತ್ತಿಕ್ಕಿಸಲು ತವಕಿಸುವ ಮುಖಭಾವ. ಉರಿಯುತ್ತಿದ್ದ ದೀಪದ ಬತ್ತಿಯನ್ನು ಇನ್ನಷ್ಟು ಎತ್ತರಿಸಿದಳು. ಶುಭ್ರವಾಗಿ ಒರಿಸಿಟ್ಟ ಗಾಜಿನಿಂದ ಬೆಳಕು ಪ್ರಕಾಶಮಾನವಾಯಿತು. ಒರಿಸಿದಷ್ಟೂ ತುಂಬಿಕೊಳ್ಳುತ್ತಿದ್ದ ಗಂಡನ ಕಣ್ಣೀರನ್ನು ಕಂಡು ಅವಳ ಕರುಳು ಹಿಂಡಿದಂತಾಗಿ "ಯಾಕೆ ಅಂದ್ರೆ ? ಯಾಕೆ ಅಳ್ತಾ ಇದೀರಿ ? ನಾನಿನ್ನೂ ಗಟ್ಟಿಯಾಗಿದ್ದೀನಿ, ನಾನಿರೋತನ್ಕ ನಿಮ್ಗೆ ಇನ್ನೇನೂ ಆಗ್ದಂಗೆ ನೋಡ್ಕತ್ತೀನಿ" ಎನ್ನುತ್ತ ಹಣೆಯ ಮೇಲೆ ಕೈಯಿಟ್ಟಳು. ಭುಜಂಗಯ್ಯ ಸುಶೀಲಳ ಕೈಯನ್ನು ಹಿಡಿದುಕೊಂಡು ವಾತ್ಸಲ್ಯದಿಂದ ಅದುಮುತ್ತ "ಸುಶೀ ಈ ಕಣ್ಣೀರಿನ ಸುಖ ಉಣ್ಣಾಕೆ ನನ್ನಾಸೆಸಟ್ಕ" ಎಂದು ಮಗುವಿನ ಹಾಗೆ ಬಿಕ್ಕಿ ಬಿಕ್ಕಿ ಅಳತೊಡಗಿದ. "ಥೂ ಅಂಗ್ಯಾಕೆ ಅಂತೀರಿ ; ನಂಗಾಗಿ ತಾನೇ ನೀವು ನಿಮ್ಮ ಬಂಧು

ಗಳನ್ನೆಲ್ಲಾ ಬಿಟ್ಟು, ಅನುಭವಿಸೋಕಾಗದ್ದನ್ನೆಲ್ಲಾ ಅನುಭವಿಸುತ್ತಾ ಇಲ್ವಾ" ಎಂದವಳೇ ಗಂಡನನ್ನು ಮೃದುವಾಗಿ ಬೆರಳಿಗೂ ಕಣ್ಣು ಬಂದುವೇನೊ ಅನ್ನುವಂತೆ ಅವನ ಕೈ ಸುಶೀಲಳ ತೋಳುಗಳನ್ನು ಸವರಿದವು. ಅವು ತಾವು ಒಲಿದ ತೋಳುಗಳು. ಅವು ತನ್ನನ್ನು ಎಂದೂ ಬಿಡುವುದಿಲ್ಲ. ತಾನೆಂದೂ ಒಣಗಿ ಹೋಗದಂತೆ, ತನ್ನೊಳಗಿನದೆಲ್ಲಾ ಬತ್ತಿಹೋಗದಂತೆ ಸದಾ ಆಸರೆಯಾಗುತ್ತವೆ ಎಂಬ ಭರವಸೆಯಿಂದ ಅವನ ಜೀವ ಪ್ರಕಾಶಗೊಂಡಿತು. ಏನೇನೊ ಮಗುವಿನ ಹಾಗೆ ಖುಷಿಯಿಂದ ತೊದಲತೊಡಗಿದ. ಸುಶೀಲಳಿಗೂ ಗಂಡನ ಈ ಪರಿಯ ಉತ್ಸಾಹವನ್ನು ಕಂಡು ಹಗುರವಂತೆ ಅನ್ನಿಸಿತ್ತು. ಪಕ್ಕದಲ್ಲಿದ್ದ ದೀಪವನ್ನು ಇನ್ನಷ್ಟು ಎತ್ತರಿಸಿದಳು. ಷ್ಟು ಬೆಳಕಾದರೂ ಸಾಲದೆನಿಸಿತು. ದೀಪವನ್ನು ಗಂಡನ ಮುಖದ ಸಮೀಪ ಹಿಡಿದಳು. ಬೆಳಕಾಡದ ಕಣ್ಣುಗಳಲ್ಲಿ ಬೆಳಕನ್ನು ಕಾಣಬಯಸಿದಳು. ಇಲ್ಲ ಇಲ್ಲ ಜೀವವಿರುವ ತನಕ ಈ ಕಣ್ಣುಗಳು ಹಗಲು-ರಾತ್ರಿಯ ಕತ್ತಲು-ಬೆಳಕಿನ ಅರಿವಿನಿಂದ ವಂಚಿತವಾಗಿ ಹೋಗಿವೆ. ಇನ್ನು ಕ್ರೂರ ವಾಸ್ತವವನ್ನು ದೂರ ತಳ್ಳುತ್ತ, ತನ್ನ ಗಂಡನಲ್ಲಿನ್ನೂ ಆ ಶಕ್ತಿ ನಷ್ಟವಾಗಿಲ್ಲವೆಂಬ ಭರವಸೆಯನ್ನು ತುಂಬಿಕೊಳ್ಳತೊಡಗಿದಳು. (454-55)

ಇಲ್ಲಿ ದೀಪ ಕಣ್ಣುಗಳ ವ್ಯಾಪಾರ, ಒತ್ತುವ, ಅದುಮುವ, ನೇವರಿಸುವ, ಸವರುವ ಕೈಬೆರಳುಗಳ ಕಣ್ಣಿನ ಕೆಲಸ, ಸುಶೀಲ ಬೆಳಕನ್ನು ಹತ್ತಿರ ಹತ್ತಿರ ತರುತ್ತಾ, ದೊಡ್ಡದು ದೊಡ್ಡದು ಮಾಡುತ್ತಾ ಗಂಡನ ಕಣ್ಣಲ್ಲಿ ಬೆಳಕು ಕಾಣುವ ಅದಮ್ಯ ಹಂಬಲ, ಕಣ್ಣು ಬೆಳಗುತ್ತವೆ ಎನ್ನುವ ಭರವಸೆ, ಅದಕ್ಕೆ ತಕ್ಕಂತೆ ಗಂಡನ ಆಶಯುವೂ 'ಪ್ರಕಾಶ' ಗೊಳ್ಳುವುದು, ಕಣ್ಣಾಗುವುದು ; ಸುಶೀಲ ಮಗುವಿನಂತೆ ಗಂಡನನ್ನು ಎದೆಗವುಚಿಕೊಳ್ಳುವುದು---ತಾನೂ ಮಗುವಿನಂತೆ ಕುರುಡಿನಲ್ಲಿ ಕಣ್ಣು ಕಾಣಬಯುಸುವುದು ಇದೆಲ್ಲಕ್ಕೂ ಒರಿಸಿದಂತೆಲ್ಲಾ ತುಂಬಿಕೊಳ್ಳುತ್ತಿರುವ ಕಣ್ಣಿನ ಒರತೆ ಕಣ್ಣೀರು-ಇವೆಲ್ಲಾ ಇಲ್ಲಿನ ದುಃಖವನ್ನು ಟ್ರ್ಯಾಜಿಡಿಯ ತೀವ್ರತೆಗೆ ಮೊನಚುಗೊಳಿಸುವಂತಹವು. ಹಾಗೆಯೇ ಸುಶೀಲೆ ಲೈಂಗಿಕ ದುರಾಗ್ರಹಕ್ಕೆ ಒಳಗಾದಾಗ ಭುಜಂಗಯ್ಯ 'ಬೇಡಿ, ಇದ ಮುಟ್ಟಬೇಡಿ' ಎಂದ. ಮುಟ್ಟಲಾಗದ 'ಇ...'ವನ್ನು ಮುಟ್ಟಿ ಬೆಳಗಿಸುವುದೂ ಕೂಡಾ :

"ಮೇಲೇಳು ಸುಶಿ. ಮೊದ್ಲು ದೀಪ ಹಚ್ಚು" ಎಂದ ಗಂಡನ ಮಾತು ಅವಳನ್ನು ಇನ್ನಷ್ಟು ಇರಿಯತೊಡಗಿತು. ಏನನ್ನು ಕಾಣಲು ದೀಪ ಹಚ್ಚಬೇಕು ? ಇನ್ನೂ ತನ್ನ ಪಾಲಿಗೂ ಬೆಳಕಿಲ್ಲದಂತಾಯಿತು. ಎಂಥ ವಿಪರ್ಯಾಸ ? ಊರೆಲ್ಲಾ ಬೆಳಕಿಂದ ಬೆಳಗಿದರೆ ತನ್ನ ಮನೆಯಲ್ಲಿ ಕತ್ತಲು, ಇದ್ದ ಕತ್ತಲಿಗೆ ಇನ್ನಷ್ಟು ಕತ್ತಲು. (507)

ಮೇಲಿನ ದೀಪ, ಕಣ್ಣು, ಬೆಳಕು, ಕತ್ತಲೆಗಳೊಡನೆ ಇದನ್ನು ತಾಳೆ ಇಟ್ಟಾಗ ದಾರುಣತೆ ಇನ್ನೂ ತೀಕ್ಷ್ಣಗೊಳ್ಳುತ್ತದೆ. ಅಲ್ಲದೆ ಅಲ್ಲಿ ಸುಶೀಲ ಗಂಡನನ್ನ ಮಗುವಿನಂತೆ ಎದೆಗೆ ಅನಿಸಿಕೊಳ್ಳುವಂತೆ.

> ಹೆಂಡತಿಯನ್ನು ಒಂದು ಪುಟ್ಟ ಮಗುವೇನೊ ಅನ್ನುವಂತೆ ಭುಜಂಗಯ್ಯ ಮೃದುವಾಗಿ ಎದೆಗೊತ್ತಿಕೊಂಡು, ಮೃದುವಾಗಿ ಮೈದಡವುತ್ತಾ ಸಂತೈಸಿದ ... ತಕ್ಷಣ ಭುಜಂಗಯ್ಯನಿಗೆ ಕೈಮೈಗೆಲ್ಲ ರಕ್ಕಸನ್ನು ಬಳಿದುಕೊಂಡಿದ್ದ ಮಗುವನ್ನು ಗೊತ್ತಿಲ್ಲದೆ ಎತ್ತಿ ಎದೆಗವುಚಿಕೊಂಡು ಬಿಟ್ಟಿರುವನೇನೋ ಅನ್ನಿಸಿ ಕೆಳಗಿಳಿಸಬೇಕೆನಿಸಿತು. ಆದರೇಕೋ ಅಪ್ಪಿದ ಕೈಗಳು ಸಡಿಲವಾಗಲಿಲ್ಲ. (507)

ಆದೀಗ ಪ್ರೇಮದ 'ಇನ್‌ಸ್ಟಿಂಕ್', ಜೈವಿಕತೆ, ಮಾನಸಿಕ 'ಅನಿಸಿಕೆ'ಯನ್ನು ಮೆಟ್ಟಿ ತಾನೇ ತಾನಾಗಿ ರಾರಾಜಿಸುವುದು---"ಕೆಳಗಿಳಿಸಬೇಕೆನ್ನಿಸಿ"ದ ಅನಿಸಿಕೆಯನ್ನು, ಇಲ್ಲವಾಗಿಸಿ ಒಲುಮೆಯ 'ಅಪ್ಪಿದ ಕೈಗಳು ಸಡಿಲವಾಗ'ದೇ ಇರುವ ಇನ್‌ಸ್ಟಿಂಕ್ಟನ್ನು ಸತ್ಯವಾಗಿಸುವುದು. ಹಾಗೆ ಪ್ರೇಮದ ಋಜುವನ್ನು ಸಾಕ್ಷಾತ್ಕರಿಸುವಲ್ಲೇ ಜೀವದ ಅದಮ್ಯತುಯ್ಯುವನ್ನೂ ಪ್ರತ್ಯಕ್ಷಿಸುವುದೂ ಕೂಡಾ, ಈ ಅತ್ಯದ್ಭುತವಾದ ಸುಶೀಲಳ ಅನುಭವ ಸತ್ಯದಲ್ಲಿ :

> ಬೇರೆ ವಿಧಿಯಿಲ್ಲದೆ **ಬಿಕ್ಕಿ ಬಿಕ್ಕಿ ಅಳುತ್ತ ತೊಡೆ ಸಡಿಲಿಸಿದಳು** (506)

ಅದಕ್ಕಾಗಿ ಸುಶೀಲ ಎಷ್ಟು ಅಪ್ಯಾಯಮಾನವಾದ ಮಾನವೀಯ ಸಹಜಳು, ರಾಜುವನ್ನ ತಮ್ಮನಾಗಿ ತಬ್ಬಿಕೊಂಡೇ ಲೈಂಗಿಕ ಸಾಂತ್ವನವನ್ನು ಪಡಕೊಂಡು ಪ್ರಾಮಾಣಿಕವಾಗಿ ಮರುಗುವ ಮಾನವೀಯ ಸಂಪನ್ನಳು—ತನ್ನ ಗಂಡನಾದ ಭುಜಂಗಯ್ಯನೂ ಕೂಡಾ, ತನಗೆ ತಾಯಾಗಿ ಉಣಿಸಿದವಳನ್ನು ಬಯಸಿ ಕೂಡಿ ಪರಿತಪಿಸುತ್ತಾ ಮಾನವೀಯ ಮಹಂತನಾಗುವಂತೇನೇ.

ಸುಶೀಲ 'ಬಿಕ್ಕಿ ಬಿಕ್ಕಿ ಅಳುವುದು' ಎಷ್ಟು ಸುಶೀಲವೋ ಅಷ್ಟೇ 'ಸುಶೀ'ಯಾಗಿ ಜೀವದ ತುಯ್ತಕ್ಕೆ 'ತೊಡೆ ಸಡಿಲಿಸು'ವುದೂ ಕೂಡಾ. ಹಾಗಾಗಿ ಅವಳು ದಂತಕಥೆಗಳ ಸೀತೆ-ಸಾವಿತ್ರಿಯಲ್ಲ: ಜೀವಂತ ಕಥೆಯ ಜೀವಂತ 'ಸುಶೀ'.

ಉದ್ದಕ್ಕೂ 'ಇಟ್ಟುಕೊಂಡವ'ಳೆನಿಸಿಕೊಳ್ಳುತ್ತಾ ತಂದೆಯಿಂದ ಮೊದಲುಗೊಂಡು ನೆರೆಹೊರೆಯವರಿಂದಲೂ ಬಹಿಷ್ಕೃತಳಾಗಿ ಉದ್ದಕ್ಕೂ ನೋಯ್ಯುತ್ತಲೇ ಹೃದಯ ಪ್ರೇಮವನ್ನು ಉಕ್ಕಿಸುತ್ತಲೇ, ಬಂದವರಿಗೆಲ್ಲಾ ಅನ್ನವನ್ನಿಕ್ಕುತ್ತಲೇ, ತನಗೆ ಗಂಡನಿದ್ದೂ ಬಳೆಯ ನಿಜವಾದ ಭಾಗ್ಯ—ಮನೆ ತುಂಬುವ ಮಕ್ಕಳು ಪಡೆಯುವ, ಮುತ್ತೈದೆ ಎನಿಸಿಕೊಳ್ಳುವ ಅಷ್ಟೇಕೆ ಕೇವಲ ಹೆಂಡತಿ ಎನಿಸಿಕೊಳ್ಳುವಷ್ಟರ ಭಾಗ್ಯ–

ತನಗೇ ಇಲ್ಲದಿದ್ದರೂ ಎಲ್ಲಾ ಊರಿನ ಹೆಂಗಸರಿಗೆಲ್ಲಾ ಬಳೆಯ ಭಾಗ್ಯವನ್ನು ತೊಡಿಸುವ ಈ ನಿತ್ಯ ಹತಭಾಗಿನಿಯ ಕಾರುಣತೆ ಮಮ್ಮಲ ಮರುಗುವ ಮಾನವೀಯ ಅಂತಃಕರಣದ್ದು. ಆವಳು ಬಳೆ ಮಾರಾಟಕ್ಕೆ ಹೋಗುವಾಗ ತಂದೆಯ ಹಿಂದೆ ಹುಡುಗಿಯಾಗಿ ನೋಡುತ್ತಿದ್ದ ಗಿಡ ಮರಗಳನ್ನು, ಹೊಲ ಗದ್ದೆಗಳನ್ನು, ಕೆರೆ-ಕುಂಟೆ, ಮೋಡ ಆಕಾಶ ಇವುಗಳನ್ನೆಲ್ಲಾ ಚಿರಪರಿಚಿತರಂತೆ, ಸಂಗಾತಿಗಳಂತೆ ನೆನಸಿಕೊಳ್ಳುತ್ತಾ ಅವುಗಳ ಮೌನ ಮೈತ್ರಿಯಲ್ಲೇ ಸಾಂತ್ವನ ಪಡೆದುಕೊಳ್ಳುವುದು, ತನ್ನ ಹಿತ್ತಲಿನ ಬಾಳೆಗಿಡ, ಹುಲ್ಲುಗರಿಕೆ, ಅಲ್ಲಿನ ಇರುವೆಗಳ ಸಾಲು ನೋಡುತ್ತ ಪ್ರಕೃತಿಯೊಂದಿಗೆ ಸಹಜವಾಗಿ ಬೆರೆತುಕೊಳ್ಳುವುದು — ಈ ಎಲ್ಲವುಗಳ ಸಾಂಗತ್ಯವನ್ನು ತನ್ನ ಜೀವಕ್ಕೆ ಒಬ್ಬನೇ ಒಬ್ಬನಾದ, ಸರ್ವಸ್ವವೂ ಆದ ಸಂಗಾತಿಯಲ್ಲಿ, ಅವನ ತೋಳ ತಬ್ಬುಗೆಯಲ್ಲಿ ಕಂಡುಕೊಂಡು ಹಿಗ್ಗುವುದು. ಕಣ್ಣಿಲ್ಲದ ಗಂಡನಿಗೆ ಕಣ್ಣಾಗಿ, ಕೈಯಾಗಿ, ಮೈಯಾಗಿ, ಮನವಾಗಿ ಓಡಾಡುತ್ತಾ, ಹಾಡು ಕಲಿಸುತ್ತಾ, ಉಣಿಸುತ್ತಾ, ತಣಿಸುತ್ತಾ ಭುಜಂಗಯ್ಯನ ಹನ್ನೊಂದನೇ ಅವತಾರವೂ ಆದವಳು-ಅವನು ಕೊನೆಗೆ ಸತ್ತೂ ಗೆದ್ದರೂ, ಇವಳು ಇನ್ನೂ ಉಳಿದೂ ಗೆಲ್ಲುವ ಕಾಯಕದ ಒಡಲಾಳದವಳು ಭುಜಂಗಯ್ಯನ ಹನ್ನೊಂದನೇ ಅವತಾರವಾಗುವಳು.

ಕಣ್ಣು ಕಳಕೊಂಡ ಭುಜಂಗಯ್ಯ ಎಷ್ಟು ಕಾಲಾಗಿ ಕಾಯಕವಾಗಿದ್ದನಲ್ಲವೇ? ಹಾಗೆಯೇ ಈಗ ಗಂಡನನ್ನ ಕಳಕೊಂಡ ಸುಶೀ ಕಾಯಕದಲ್ಲಿ ಕಣ್ಣೂ ಕಾಲಾಗಬೇಕಲ್ಲವೇ? ಗಂಡನಾಗಿ ಅವತಾರಗೊಳ್ಳಬೇಕಲ್ಲವೇ? ಗಂಡನನ್ನು ಮತ್ತೆ ಪಡಕೊಳ್ಳಬೇಕಲ್ಲವೇ? ಅಂದಾಗಲೇ ತಾನೇ ಭುಜಂಗಯ್ಯನ ದಶಾವತಾರ ಅನಂತವಾಗುವುದು—ಅವನು ಜೀವಂತವಾಗುವುದು, ಚಿರಂಜೀವಿಯಾಗುವುದು; ಭವಸ್ಥಾವರವು ಶಿವ ಜಂಗಮವಾಗುವುದು:

> ಹೊತ್ತು ಮೂಡಿ ಮೂರು ಮಾರಾಗಿದ್ದರೂ ಭುಜಂಗಯ್ಯನಿಗೆ ಎಚ್ಚರವೇ ಆಗಿರಲಿಲ್ಲ. ಅಂಥ ಸವಿನಿದ್ದೆ. ಯಾವಕಾಲವಾಗಿತ್ತೋ ಇಂಥ ನಿದ್ದೆ ಮಾಡಿ. ಕೆಲಸದ ಹುಡುಗ ಬಂದು ಕದ ತಟ್ಟಿದಾಗ ಎದ್ದು ಕೂತ ಸುಶೀಲಳಿಗೂ ನಾಚಿಕೆಯಾಗಿತ್ತು. ತಾನು ಇಷ್ಟು ಹೊತ್ತು ಮೈಮರೆತು ಮಲಗಿಬಿಟ್ಟೆನಲ್ಲ ಅಂತ. ಗಂಡನತ್ತ ನೋಡಿದಳು. ಕೊಂಚ ಅನುಮಾನವಾಯಿತು. ಅವನಿನ್ನೂ ಮಲಗಿರುವನೋ ಇಲ್ಲ ಎಚ್ಚರಗೊಂಡಿದ್ದಾನೋ? ಗುಡ್ಡೆಗಳೇ ಇಲ್ಲದ ಕಣ್ಣ ರೆಪ್ಪೆಗಳು ನಿಶ್ಚಲವಾಗಿ ಬಿಗಿದುಕೊಂಡಿದ್ದವು. ಇಲ್ಲ ಇಲ್ಲ ಇನ್ನೆಂದಿಗೂ ತನ್ನ ಗಂಡನ ಕಣ್ಣುಗಳು ತನ್ನ ಜೊತೆ ಮಾತಾಡಲಾರವು. ಇಲ್ಲ ಅವನಿಗೆಂದಿಗೂ ಕಣ್ಣುಗಳ ಮೂಲಕ ಬೆಳಕಾಗುವುದಿಲ್ಲ, ಛೇ, ತಾನೇಕೆ ಏಳುವ ಹೊತ್ತಿಗೆ ಇದನ್ನೆಲ್ಲ ಅಂದುಕೊಳ್ಳ ತೊಡಗಿದೆ? ಇವರು, ಇನ್ನಷ್ಟು ಹೊತ್ತು ಮಲಗಿರಲಿ ಎಂದು ಕೊಂಡವಳೆ ಮನೆ ಗೆಲಸಕ್ಕೆ ತೊಡಗಿದಳು. ಒಪ್ಪಾರಿನ ದನಗಳನ್ನು ಆಳು ಮನೆ ಮುಂದೆ ತಂದು ಕಟ್ಟಿದ. ಸುಶೀಲ ಬೀದಿ ಬಾಗಿಲ ಕಸ ತಾನೇ

ಗುಡಿಸಿ ಸಗಣಿ ನೀರು ಚಿಮುಕಿಸಿ ರಂಗೋಲೆ ಬಿಡಿಸಿದಳು. ಸುಮಾರು ದಿನ
ಗಳಿಂದ ಆ ಮನೆ ಮುಂದೆ ಇಲ್ಲವಾಗಿದ್ದ ಜೀವಕಳೆ ಇನ್ನೊಮ್ಮೆ ತುಂಬಿ
ಕೊಂಡಿತ್ತು. ರಾತ್ರಿ ಮಲಗುವ ಮುಂಚೆಯೇ ಮರೆಯದೆ ಬಚ್ಚಲ ಮನೆ
ಒಲೆಗೆ ಉರಿಹಾಕಿದ್ದು ನೀರು ಕಾದು ಕುದಿಯುತ್ತಿತ್ತು. ಮೈ ಹಗುರವಾಗು
ವವರೆಗೂ ನೀರು ಸುರಿದುಕೊಂಡ ಸುಶೀಲ ಗೆಲುವಾಗಿ ಮೊದಲು ಒದ್ದೆ ಬಟ್ಟೆ
ಯಲಿ ದೇವರ ಪಟಗಳನ್ನೆಲ್ಲಾ ಚೆನ್ನಾಗಿ ಸ್ವಚ್ಛಗೊಳಿಸಿದಳು. ತಾನೇ ಹಿತ್ತಲ
ಬೇಲಿಗಂಟಿದ್ದ ಕೊಳವೆ ಹೂವುಗಳನ್ನು ಕೊಯ್ದು ತಂದಳು. ಗಂಡನ ಶಿವ
ಪೂಜೆಗೆ ಎಲ್ಲಾ ಅಣಿ ಮಾಡಿಟ್ಟು ಹಾಗೆ ಮನೆಯಲ್ಲಿನ ಪಾತ್ರೆಗಳನ್ನು ತೊಳೆದು
ಒಲೆ ಹಚ್ಚಿ ಟೀ ಮಾಡಲು ನೀರಿಟ್ಟು ಗಂಡನನ್ನು ಎಚ್ಚರಿಸಿದಳು. ಭುಜಂಗಯ್ಯ
ನಿಗೆ ಯಾಕೋ ಬೇಗ ಏಳಲು ಇಷ್ಟವಿಲ್ಲದಿದ್ದರೂ ಹೆಂಡತಿಯ ಒತ್ತಾಯಕ್ಕೆ
ಎದ್ದವನೇ ತಾನಾಗಿಯೇ ಹಿತ್ತಲಿಗೆ ಹೋಗಿಬಂದ. ಗಂಡ ಕಣ್ಣಿದ್ದವನಂತೆಯೇ
ವ್ಯವಹರಿಸುತ್ತಿರುವ ರೀತಿ ಕಂಡು ಸುಶೀಲಳಿಗೆ ಕೊಂಚ ಆಶ್ಚರ್ಯ. ಭುಜಂಗಯ್ಯ
ಬೇಡ ಎಂದರೂ ಬಿಡದೆ ಸುಶೀಲ ತಾನೇ ಗಂಡನಿಗೆ ಸ್ನಾನ ಮಾಡಿಸಿದಳು.
ತುಂಬಾ ದಿನಗಳಿಂದ ತೊಟ್ಟಿರದಿದ್ದ ಅಂಗಿ ಮತ್ತು ಪಂಚೆಗಳನ್ನು ಟ್ರಂಕಿನಿಂದ
ತೆಗೆದು ತೊಡಿಸಿ ಶಿವಪೂಜೆಗೆ ಕೂರಿಸಿದಳು.

ತುಂಬಾ ದಿನಗಳಿಂದ ಮರೆತೇ ಹೋದಂತಿದ್ದ ಶಿವಪೂಜೆಯಲ್ಲಿ ಸಂಪೂರ್ಣ
ಮಗ್ನನಾದ ಭುಜಂಗಯ್ಯನಿಗೆ ಕಾಲದ ಅರಿವೇ ಉಂಟಾಗಲಿಲ್ಲ. ಸುಶೀಲ
ತಂದಿಟ್ಟ ಟೀ ತಣ್ಣಗಾಗಿ ಹೋಗಿತ್ತು. ಅವಳು ಮತ್ತೆ ಬಿಸಿ ಮಾಡಿ ತಂದಾ
ಗಲೂ ಗಂಡನ ಪೂಜೆ ಮುಗಿದಿರಲೇ ಇಲ್ಲ. ಮತ್ತೆ ಟೀ ತಣ್ಣಗಾಗಿ ಬಿಡುತ್ತ
ದೆಂದು ಹೇಳಬೇಕೆಂದುಕೊಂಡರೂ ಯಾಕೋ ಬಾಯೇ ಬರಲಿಲ್ಲ. ತಾವಾಗಿಯೇ
ಮುಗಿಸಿ ಏಳಲಿ ಅಂದುಕೊಂಡವಳೇ ಟೀ ಮತ್ತೆ ಒಲೆ ಪಕ್ಕ ಇಟ್ಟು ರೊಟ್ಟಿ
ಮಾಡಲು ತೊಡಗಿದಳು. ಭುಜಂಗಯ್ಯ ತನ್ನ ಇಷ್ಟ ದೇವರುಗಳನ್ನೆಲ್ಲಾ
ಜೋರಾಗಿ ಒಂದು ಸಲ ಸ್ಮರಿಸಿದವನೇ ಪ್ರೀತಿಯಿಂದ ಹೆಂಡತಿಯನ್ನು ಕೂಗಿದ.
ಗಂಡನ ಕರೆಗೆ ಕಾದಿದ್ದವಳಂತೆ ಸುಶೀಲ ತಟ್ಟನೆ ಬಂದಳು. ಇಷ್ಟಲಿಂಗಕ್ಕೆ ಇಟ್ಟಿದ್ದ
ಹೂವಿನಲ್ಲಿ ಒಂದು ಹೂ ತೆಗೆದು ತನ್ನ ಕಿವಿಗೆ ಸಿಕ್ಕಿಸಿಕೊಂಡು ಉಳಿದುದನ್ನು
ಹೆಂಡತಿಗೆ ಕೊಟ್ಟ. ಸುಶೀಲ ಎರಡೂ ಕೈಗಳಿಂದ ಗಂಡಕೊಟ್ಟ ಹೂಗಳನ್ನು
ತೆಗೆದುಕೊಂಡವಳೇ ಒಮ್ಮೆ ಕಣ್ಣಿಗೊತ್ತಿಕೊಂಡು ತಲೆಗೆ ಮುಡಿದುಕೊಂಡಳು.
ಅಡಿಗೆಮನೆಯಲ್ಲಿ ಒಲೆಯ ಮುಂದೆಯೇ ಕೂರಿಸಿ ಗಂಡನಿಗೆ ರೊಟ್ಟಿ ಕೊಟ್ಟಳು.
ಬಿಸಿಬಿಸಿ ರೊಟ್ಟಿಯಲ್ಲಿ ಹೆಂಡತಿಯ ವಾತ್ಸಲ್ಯವೂ ಬೆರೆತು ತುಂಬಾ ರುಚಿ
ಎನಿಸಿತು. ಇಬ್ಬರಿಗೂ ಬದುಕಿನಲ್ಲಿ ಏನೂ ಕೊರತೆ ಅನ್ನಿಸಲಿಲ್ಲ. ಕಳೆದು
ಹೋಗಿದ್ದನ್ನು ಮತ್ತೆ ಪಡೆದುಕೊಂಡಂತೆ. ಇನ್ನೊಮ್ಮೆ ಎಲ್ಲಾ ತುಂಬಿ ಬಂದಂತೆ,



ಶೂದ್ರ

ಸುಶೀಲ ಎಂಜಲುತಟ್ಟೆಯ ನೀರೆಗಳಲು ಹಿತ್ತಲಿಗೆ ಬಂದಾಗ ಆಕಾಶ ತೊಳೆ ದಿಟ್ಟಂತೆ ಶುಭ್ರವಾಗಿದ್ದು, ಹಿತ್ತಲಲ್ಲಿದ್ದ ಗಿಡಮರಗಳು ಎಳೆಬಿಸಿಲಲ್ಲಿ ನಳನಳಿಸು ವುದನ್ನು ಕಂಡು ಇನ್ನಷ್ಟು ಖುಷಿಗೊಂಡಳು. (ಪು. 457-459)

ಭುಜಂಗಯ್ಯ ಕಣ್ಣು ಕಳಕೊಂಡು ಕೋಲು ಹಿಡಿದು ಸ್ಥಾವರವಾಗುವ ಅವಸ್ಥೆ ಯಲ್ಲಿ ತಂಬೂರಿ ಹಿಡಿದು ಜಂಗಮವಾಗುವುದೀಗ ಅವನ ಪವಾಡ. ಆ ಜಂಗಮದ ಕಾಯಕದಲ್ಲೇ, ವಿಷ ಕುಡಿದು ವಿಷಕಂಠನಾಗುವುದರಲ್ಲೇ, ಐಕ್ಯವಾಗುವುದೂ ಕೂಡಾ ಅವನ ಪವಾಡ. ಇನ್ನು ಆ ಜಂಗಮವನ್ನು ಮುಂದುವರಿಸುವುದು, ಸುಶೀಲಳ ಕಾಯಕ ದಲ್ಲೆ ಅವತಾರಗೊಳ್ಳಲಿರುವುದೀಗ ಅವನ ಮುಂದಿನ ಪವಾಡ.

ರೆಕ್ಕೆ ಮುರಿದು ಬಿದ್ದ ಹಕ್ಕಿಯ ಹಾಗೆ ಚೀರಾಡುತ್ತಿದ್ದ ಹೆಂಡತಿಯನ್ನು ಬರ ಸೆಳೆದುಕೊಂಡು ಭುಜಂಗಯ್ಯ 'ಎಲ್ಲಾ ಅವನ ಲೀಲೆ...ಅವನ ಲೀಲೆ' ಅನ್ನುತ್ತಾ ಮೃದುವಾಗಿ ಅವಳ ಮೈ ತಟ್ಟಿ ಸಂತೈಸತೊಡಗಿದ. (526)

ಭುಜಂಗಯ್ಯನ ಕೊನೆಯ ಉಸಿರಿನ ಪದ 'ಲೀಲೆ'—ಅವನು ಪ್ರಿಯವಾಗಿ ಅನ್ನುತ್ತಿದ್ದ. 'ಶಿವನಾಟ' ಆ 'ಲೀಲೆ'ಯ ಜಂಗಮವೇ ಅವನ ಕೊನೆಯುಸಿರಿನ ಮಂತ್ರ, ಅದನ್ನ ಬಿಟ್ಟು, ಅವನ್ನ 'ಸುಶೀ'ಗೆ ಬಳುವಳಿಯಾಗಿ ಬಿಟ್ಟು ಹೋಗುತ್ತಾನೆ ಭುಜಂಗಯ್ಯ.

ಗಂಡನ ಗಡ್ಡದಲ್ಲೆಲ್ಲಾ ಒಂದೇ ಒಂದು ಕಪ್ಪಿಲ್ಲದೆ ಬಿಳಿಯದ್ದುದಕ್ಕಾಗಿ ಸುಶೀಲೆ ತನ್ನ ತಲೆಗೂದಲನ್ನೆಲ್ಲಾ ಕೆದಕಿ ಬೆದಕಿ ನೋಡಿಕೊಂಡರೂ ಒಂದೇ ಒಂದು ಬಿಳಿ ಇಲ್ಲ ದ್ದಕ್ಕಾಗಿ ಮರುಗಿದ್ದಳಲ್ಲವೇ ? ಈಗ ಆ ವಾಸ್ತವವನ್ನು ತಳ್ಳಿಬಿಡಲಾದೀತೇ ? ಸುಶೀಲೆ ಸಕೇಶಿನೀ ಸುಂದರಿಯಲ್ಲವೆ ? ಅವಳ ಚಿಮ್ಮುವ ಪ್ರೇಮದ ಚಿಲುಮೆಯನ್ನರಸಿಕೊಂಡು ಬರಲಾರನೇ ಒಬ್ಬ 'ರಾಜ' ಅವಳಿಗೆ ? ಎಷ್ಟಾದರೂ ಜೀವದ ಸೆಲೆಗೆ ತೊಡೆ ಸಡಿಲಿದ ಜೀವಂತ ಜೀವಿಯಲ್ಲವೇ ಸುಶೀ ? ಚಿಕ್ಕಂದಿನಿಂದ ಇಂದಿನವರೆಗೂ ಬಳೆ ತೊಡಿಸಿ ತೊಡಿಸಿ ಮುತ್ತೈದೆ ಭಾಗ್ಯವನ್ನು ಹಂಚುತ್ತಲೇ ಬಂದ ಇಕ್ಕುವ ಕೈಗೆ ತನಗೆ ಬಳೆ ತೊಡುವ ಭಾಗ್ಯ ಬರಲಾರದಿದ್ದೀತೇ ? ಬಳೆ ತೊಡೆಸುವ 'ರಾಜ' ಬರಲಾರನೇ ಆ ಕೈಗೆ ?

ಯಾವ ವಿಷದ ನಾರಾಯಣ ಸುಶೀಲಳನ್ನು ಕಚ್ಚಿ ಅವಳ ತೊಡೆ ಸಡಿಲಿಸಿದ್ದನೋ ಆ ವಿಷವನ್ನೇ ನುಂಗಿ ಭುಜಂಗಯ್ಯ ಅವನನ್ನು ಉಳಿಸಿದ್ದನಲ್ಲವೇ ? ಈಗ ಆ ನಾರಾ ಯಣ ಅವನ ದೇವರುಗಳಂಥ ತಂದೆ ತಾಯಿಗಳಂತೆ, ತನಗೂ ತನ್ನ ಹೆಂಡತಿಗೂ ತಂದೆ ತಾಯಿಗಳಾಗಿದ್ದು ಅವನ ತಂದೆ ತಾಯಿಗಳಂತೆ, ಈಗ ತನ್ನ ವಿಷವನ್ನೆಲ್ಲಾ ಕಳೆದು

ಕೊಂಡು, ತಂದೆ ತಾಯಿಗಳ ನಿಜರಕ್ತದಲ್ಲಿ ಒಳ್ಳೆಯುವನಾದಾನೆ ? ಆಗ ವಿಷದಲ್ಲೂ ಸುಶೀಲೆಯು ತೊಡೆ ಸಡಿಲಿಸಿದವ ಈಗ ವಿಷ ಕಳೆದುಕೊಂಡು ಹೊಸ ಜೀವವನ್ನ ಪಡೆ ಕೊಂಡವ, ಸುಶೀಲಳ ಗಂಡನಿಂದಲೇ, ಅವನ ಸಾವಿನಿಂದಲೇ, ಜೀವ ಪಡಕೊಂಡವ, ಅವಳ ಪ್ರೀತಿಗೆ ಪಾತ್ರನಾದಾನೆ. ?

ಈ ಎಲ್ಲಾ ಪ್ರಶ್ನೆಗಳಿಗೆ ಇಂಬನ್ನೀಯುತ್ತದೆ, ಕಥೆಯ ಈ ತೆರೆದ ಕೊನೆಯ ಜೀವಂತ ತುದಿ. ಸುಶೀಲೆಯು ಜೀವ ಸೋಲವ ಕಾಯಕದ್ದು, ಜೈವಿಕತೆಯ ಚಿಲುಮೆ ಯದು —ಒಲವಿನದು, ವಿಶ್ವಬಂಧುತ್ವದ್ದು- ಬಳೆ ತೊಡಿಸುವ ಸೌಭಾಗ್ಯದ್ದು. ಆದ್ದ ರಿಂದ ದುರಂತದ ನೈರಾಶ್ಯ ಆ ಕತೆಗೆ ಒಗ್ಗದ್ದು : ಭುಜಂಗಯ್ಯನ ದಶಾವತಾರ ಹೊಸ ಹೊಸ ಅವತಾರಗಳಲ್ಲೇ ಹೊಸತಾಗುತ್ತಾ ನಿರಂತರವಾಗುವಂಥಾದ್ದು : ಅಳಿವಿಲ್ಲದ ಜಂಗಮದ್ದು.

ಅವನು ಹೇಗೆ ಪಾತಾಳ ಗರಡಿಗೂ ಸಿಕ್ಕದ ಪಾತಾಳದಿಂದ ಜಾರಿಗೆ ತೆಗೆಯುವ ನಾಗದೇವನೋ, ಬಂಜರು ಭೂಮಿ ಗುದ್ದಿ ನೀರು ಬರಿಸಿದ ಭಗೀರಥನೋ, 'ಪರ' ಮಾಡಿ ಮಳೆ ಬರಿಸಿದ ವರುಣನೋ, ವಿಷದ ಹಾವನ್ನು ಕೊಲ್ಲುವ ಗರುಡನೋ ವಿಷ ವನ್ನು ನುಂಗಿ ಪ್ರಾಣವುಳಿಸಿದ ವಿಷಕಂಠನೋ, ಹೋಟಲು ಅಂಗಡಿಗಳ ಮಾಲೀಕನಾಗಿ ಅನ್ನವಿತ್ತ ಅನ್ನದಾತನೋ, ಬಿಳಿ ಜಾಲದ ಮರದ ಗೊಂಚಲು ಹೂವನ್ನು ಹಿರಿಹಿರಿದು ಹೆಂಗಳ ಮೇಲೆ ಹೂ ಮಳೆಗರೆವ ದೇವಪುರುಷನೋ, ಬಸವಣ್ಣನೋ, ಹರಿಜನರಿಗೆ ಅನ್ನವಿಕ್ಕಿ ಹೋಟೆಲು ಮನೆ ಸುಡಿಸಿಕೊಂಡು ಬಹಿಷ್ಕೃತನಾದ ಗಾಂಧಿ ಮಹಾತ್ಮನೋ, ಕೊನೆಗೆ ತಂಬೂರಿ ಮೀಟಿ ಹಾಡುತ್ತಾ ಇಡೀ ಜನತೆಯ ತಲೆದೂಗಿಸುತ್ತಾ ಭಕ್ತಿಯಲ್ಲಿ ತಣಿಸಿ ತಬ್ಬಿದ ಮಾದಳ್ಳಿಯ ಮಹಾದೇವನೋ- ಒಂದೇ, ಎರಡೇ, ಈ ಸಂತ ಸಾಮಾ ನ್ಯನ ದಶಾವತಾರ, ನೇಗಿಲಯೋಗಿ ಉತ್ತು ಬಿತ್ತು ಹತ್ತು ಜನರನ್ನ ಸಾಕಿದ ಸಂಸಾರಿ ಯಿಂದ, ತಂತಿ ಮೀಟಿ ಗಾನದ ರಸಗಂಗೆಯಲ್ಲಿ ಜನತೆಯನ್ನು ಮೀಯಿಸಿದ ಜನಾರ್ಧನ ನವರೆಗೆ. ಅವನು ಇಸ್ಪೀಟು ಆಡಲಿ, ಈಚಲ ಗರಿ ಹೆಣೆಯಲಿ 'ಯೋಗಕರ್ಮ ಸುಕೌಶ ಲಂ' ಎನ್ನುವಂತೆ ಕುಶಲತೆಯ ಕರ್ಮಯೋಗಿ.

ಭುಜಂಗಯ್ಯನ ದಶಾವತಾರಗಳೆಲ್ಲವೂ ಅವನ ಕಾಯಕದ ಕಲಾವತಾರಗಳು : ಭುಜಂಗಯ್ಯನ ಹಾವಿನ 'ಮೋಡಿ'ಯಂತೆ, 'ಮಂತ್ರ'ದಂತೆ, ಅವನ ಹಾಡಿನ 'ಮೈದುಂ ಬಿಕೆ'ಯಂತೆ ಮೂಲತಃ ಕಲೆಯ ತಾದಾತ್ಮತೆಯವು- ಅವನಿಗೆ ಅವನ ಉಸಿರಿನಷ್ಟೇ ಸಹಜವಾಗಿ ಮೈಗೂಡಿದ ಕಾಯಕದವು- ಮಣ್ಣು ಮತ್ತು ಮೈಯೇ ಮಣ್ಣಾದಂತೆ ಹೂ ಕಿತ್ತು ಕೈಯೇ ಕೆಂಪಾದಂತೆ, ಮರ ಹತ್ತಿ ಮರವೇ ಮುಗಿಲಾದಂತೆ :

ಭುಜಂಗಯ್ಯನ ಇಡೀಮೈ ಬೆವರಿನಿಂದ ಒದ್ದೆಯಾಗಿ ನೇಗಿಲಿನಿಂದ ಎದ್ದ ಕೆಂಪು ಧೂಳು ಮೈಕೈಗೆಲ್ಲಾ ಅಂಟಿದೊಡ್ಡಾಟಕ್ಕೆ ಬಣ್ಣ ಬಳಿದುಕೊಂಡು ನಿಂತಂತಾಗಿತ್ತು (ಪು.4).

ಹುಂಡಿಯಿಂದ ಕೆರೆತನಕ ನೆಲವೆಲ್ಲ ಸುಟ್ಟು ಕರಕಾಗಿದ್ದರೂ ಗಿಡಮರಗಳು ಹಸಿರು ಮುಕ್ಕಳಿಸುತ್ತಿದ್ದವು. ತಲೆ ಮೇಲೆ ಕೆಂಡ ತುಂಬಿಕೊಂಡ ಆಕಾಶ. ಕೆಳಗೆ ಸುಟ್ಟು ಕರುಕಾದ ನೆಲ. ನಡುವೆ ನಗುವ ಗಿಡಮರಗಳು. ಭುಜಂಗಯ್ಯನಿಗೆ ದೇವರ ಸೃಷ್ಟಿ ವಿಚಿತ್ರವೆನಿಸಿತು. ಯಾವತ್ತೂ ಇದನ್ನು ಅವನು ಗಮನಿಸಿರಲಿಲ್ಲ. ಕೆರೆಯೇರಿ ಮೇಲಿದ್ದ ಬಿಳಿಯ ಜಾಲದ ಹೂವಿನ ಮರವಿನ್ನೂ ಹೂ ಬಿಟ್ಟಿರಲಿಲ್ಲ. ಇನ್ನೇನೋ ಹೂ ಬಿಡುವ ಕಾಲ. ಹೂ ಬಿಟ್ಟಾಗ ನೋಡಬೇಕು. ಮರದ ತುಂಬ ಮಂಜುಕವಿದಂತೆ ಒಂದೇ ಒಂದು ಎಲೆಯೂ ಕಾಣಿಸದಷ್ಟು ಹೂಗಳು. ಮರ ಇನ್ನೂ ಅಷ್ಟು ದೂರವಿದೆ ಅನ್ನುವಾಗಲೇ ಅದರ ಘಮ ಘಮ ವಾಸನೆ. ಆ ಮರದಲ್ಲಿ ಹೂವಿರುವಷ್ಟು ಕಾಲ ಊರಿನ ಹೆಣ್ಣು ಮಕ್ಕಳ ತಲೆಯಲ್ಲೆಲ್ಲಾ ಆ ಹೂವೆ. ದೇವರ ಪೂಜೆಗೂ ಅದೆ. ಸುಶೀಲಳಿಗೆ ಈ ಹೂವಿನ ವಿಷಯವೇ ಗೊತ್ತಿಲ್ಲ. ತಾನೊಂದು ದಿನ ಹೇಳಿದಾಗ ನಕ್ಕು ಅದೆಂಥ ವಿಚಿತ್ರವಾದ ಹೂ ನೋಡುವ ಅಂದಿದ್ದಳು. ತಮಾಷೆ ಅಂದರೆ ಈ ಮರ ಒಂದೊಂದು ವರ್ಷ ಹೂ ಬಿಡುವುದೇ ಇಲ್ಲ. ಆಗ ಏನಾದರೊಂದು ಅನಿಷ್ಟವಂತೆ. ಕಳೆದ ವರ್ಷ ಮಾತ್ರ ಮರವೇ ಮುರಿದು ಬೀಳುವಂತೆ ಹೂ ಬಿಟ್ಟಿತ್ತು. ಅದಕ್ಕೇ ಕಳೆದ ವರ್ಷ ಮಾದಳ್ಳಿಗೆ ಭಾರಿ ಸುಭಿಕ್ಷ ಅಂತ ಊರವರ ನಂಬಿಕೆ, ಕೆರೆಯೇರಿ ದಾಟಿ ಸುಮಾರು ದೂರ ಬಂದಿದ್ದರೂ ಭುಜಂಗಯ್ಯನ ಮನಸ್ಸಿನಲ್ಲಿ ಮರವೇ ತುಂಬಿಕೊಂಡಿತ್ತು. ಅವನು ಚಿಕ್ಕವನಾಗಿದ್ದಾಗ ಅಂಥ ದೊಡ್ಡ ಮರವನ್ನು ಹತ್ತಿ ಹೊರೆ ಹೊರೆ ಹೂ ಗೊಂಚಲು ಮುರಿದು ಕೇಳಿದ ಊರ ಹೆಣ್ಣು ಮಕ್ಕಳಿಗೆಲ್ಲ ಕೊಡುತ್ತಿದ್ದ. ಕೆರೆಗೆ ಚಾಚಿದ್ದ ಮರದ ಕೊಂಬೆಗೂ ತಾನು ಹತ್ತಿದಾಗ ಕೆಳಗಿದ್ದವರು ಭಯದಿಂದ ತನ್ನನ್ನು ಎಚ್ಚರಿಸುತ್ತಿದ್ದ ಮಾತುಗಳು ನೆನ್ನೆ ತಾನೆ ಕೇಳಿದಂತಿವೆ. (ಪು.245-46).........

ಆಗ ತಾನಿನ್ನೂ ತುಂಬಾ ಚಿಕ್ಕವನು. ಅಪ್ಪ ಶಿವಪೂಜೆಗೆ ಕೆರೆಯೇರಿ ಮೇಲಿದ್ದ ಕಂಚುವಾಳದ ಹೂ ತರಲು ಕರೆದೊಯ್ದರು. ಮರದ ತುಂಬ ಕೆಂಪು ಬಣ್ಣವನ್ನು ಎರಚಿಬಿಟ್ಟಂತೆ. ಅಪ್ಪನ ಹೆಗಲ ಮೇಲೆ ಕೂತ ತಾನು ಕೆರೆ ನೀರಿನತ್ತ ಚಾಚಿದ್ದ ಕೊಂಬೆಯ ಹೂಗಳನ್ನೆಲ್ಲಾ ಕೊಯ್ಯುತ್ತಾ ತನ್ನ ಕೈಯೇ ಕೆಂಪಾಗಿಬಿಟ್ಟಿತೇನೋ ಅನ್ನಿಸಿತ್ತು.........(ಪು.444)

**ಭುಜಂಗಯ್ಯನ ದಶಾವತಾರಗಳು** ನಮ್ಮ ಹಳ್ಳಿಯ ಕತೆ, ನಿಮ್ಮ ಹಳ್ಳಿಯ ಕತೆ. ಎಲ್ಲಾ ಹಳ್ಳಿಯ ನಿತ್ಯ ಕಥೆ: ಭಾರತದ ಕಥೆ—ಮಾದಳ್ಳಿಯ ನಿತ್ಯ ಭಾರತೀಯ; ಮಳೆಗೆ ಬಾಯಿಬಿಡುತ್ತಾ ಮುಗಿಲನಂಬಿದ ನೆಲದ ಮಕ್ಕಳ ಬವಣೆ ಬೇಗೆಗಳ, ಆಸೆ ಭಯಗಳ ಒಲುಮೆ ದಗೆಗಳ, ನಗು, ಹೊಟ್ಟೆ ಉಚ್ಚುಗಳ, ಬೆಳಗ್ಗೆ ಹಿಗ್ಗಿ, ಬರಕ್ಕೆ ಕುಗ್ಗಿ, ಕಾಯಿಲೆ ಕಸಾಲೆಗಳಿಗೆ ಸತ್ತು ಬದುಕುತ್ತಾ, ಬದುಕಿ ಸಾಯುತ್ತಾ, ಜೀವಂತವಾಗಿಯೇ ಉಸಿರಾಡುತ್ತಾ ಜೀವಿಸುತ್ತಿರುವ ಬಡವರ ಬಲ್ಲಿದರ ಬೋರ ಬಸವರ ಕಥೆ—ಎಂದಿಗೂ ಒಲುಮೆಯ ತಂತಿ ಮಿಟಿಗೆ ಕಿವಿಗೊಟ್ಟು ಕರಗುವ, ಒಂದಾಗುವ, ಅಮಾಯಕ ಜನರ ಕಥೆ: ಈ ಅಮಾಯಕ ಜನರ ಒಡಲಾಳದಿಂದಲೇ ಬಸಿರ ಬೆಚ್ಚನೆಯಿಂದಲೇ, ಚಿಮ್ಮಿ ಚಿಲುಮೆಯಾದ ಭುಜಂಗಯ್ಯನಂತಹ ಸಾಮಾನ್ಯ ಸಂತನ ಸುತ್ತ ತೆಕ್ಕೆ ಬೀಳುವ, ಅವನ ಸಾಂತ್ವನ ಹಂಚಿಕೊಳ್ಳುವ ಸಂಸಾರದ ಕಥೆ.

ಭುಜಂಗಯ್ಯನ 'ವರ' ದಿಂದ ಮಳೆ ಬರೆಸಿದವ; ವಿಷದಿಂದ ಜೀವ ಉಳಿಸಿದವ, ಬರದಿಂದ ಪಾರುಮಾಡಿದವ, ಪಿಡುಗಿನಿಂದ ದಾಟಿಸಿದವ— ಬಂಜರು ಭೂಮಿಗೆ ಜಲ ಬರಿಸಿದವ, ಆಕಾಶ ಬಾಯಿ ಬಿಟ್ಟವರಿಗೆ ನೆಲದ ಹಸಿ ಹಂಚಿಕೊಟ್ಟವ— ಮಾದಳ್ಳಿಯ ಹಾಳು ಕೊಂಪೆಯನ್ನು ಹಸುರಿನ ಸಿರಿ ಮಾಡಿದವ.

ಭುಜಂಗಯ್ಯನ ಜೀವವೇ 'ಜೀವ' ವಾದದ್ದು—'ಅಂಟು'ವ ಒಲುಮೆಯದು. ಆ ಅಂಟಿನ ಸಹಜ ನಂಟಿನಲ್ಲಿ ಅವನು ಅಮಾಯಕ ಹೆಣ್ಣನ್ನು ಕೈಹಿಡಿದು ಬಳೆತೊಡಿಸಿದವನು. ಅವಳ ಸೌಭಾಗ್ಯವನ್ನು ತನ್ನ ತೋಳು ತಬ್ಬುಗೆಯಲ್ಲಿ ಗಳಿಸಿಕೊಟ್ಟವನು, ಸುಶೀಲೆಯನ್ನು ತನ್ನ ಒಲುಮೆಯ ಉಸಿರೇ ಆಗಿಸಿ "ಸುಶೀ"ಎಂದು ಉಸಿರಾಡಿದವನು ತಬ್ಬಲಿಯ ಶಿಶುವಿಗೆ ತಂದೆಯಾದವನು.

ಭುಜಂಗಯ್ಯನ ಜೀವವೇ ಸುಶೀ—ಅಂಟಿನ ನಂಟಿ ಸುಶೀ. ಭುಜಂಗಯ್ಯನನ್ನು ಕಂಡುಕೊಂಡವಳೇ ತನ್ನನ್ನು ತಾನು ಕಂಡುಕೊಂಡವಳು—ಸುಶೀಲೆ ಸುಶೀ ಆದವಳು; ತನ್ನ ಬಳೆ ತೊಡಿಸುವ ವ್ಯಾಪಾರವನ್ನು, ಉದ್ಯಮವನ್ನು ಕಾಯಕದ ಪ್ರೇಮವಾಗಿ ಕಂಡುಕೊಂಡವಳು—ಹತ್ತು ಕೈ ಮುಟ್ಟಿ ಮುದ್ದಾಡಿ, ಬಳೆಯ ಕಂಕಣ ಕಟ್ಟಿದವಳು: ಭುಜಂಗನ ಕೈ ಹಿಡಿದವಳು—ಕೈಯಾದವಳು: ಕೈಯಾಗಿ, ಕಣ್ಣಾಗಿ, ಮೈಯಾಗಿ, ಮನವಾಗಿ ಅರಳಿದವಳು. ತಾಯಾಗದೆ ತಾಯ್ತನದ ಬಸಿರಾದಳು, ತನ್ನ ಗಂಡನನ್ನು ತಾನೇ ಹೆತ್ತುಕೊಂಡವಳು.

ಪ್ರೇಮದ ಕಥೆಗಳನೇಕವಿವೆ, ಕಾಮದ ಕಥೆಗಳನೇಕವಿವೆ: ಆದರೆ ಪ್ರೇಮದ ಮೂಲ ಧಾತುವಾದ ವಾತ್ಸಲ್ಯದ ಕಥೆಗಳು, ವಾತ್ಸಲ್ಯದ ಪ್ರಣಯಗಳು ನಮ್ಮಲ್ಲಿಲ್ಲ. ಆದರೆ ಈ ಅನನ್ಯ ಆತ್ಮೀಯತೆಯ ವಾತ್ಸಲ್ಯ ಪ್ರಣಯಿಗಳ ನವಿರಾದ ಒಲವು 'ಕೈ



ಶೂದ್ರ

ಬೆರಳುಗಳನ್ನ ನೇವರಿಸುವ', 'ಹಣೆಯ ಮೇಲೆ ಕೈಯಿಟ್ಟು ಕೈ ತೇವಗೊಳ್ಳುವ', 'ಹೊಟ್ಟೆಯ ಮೇಲೆ ಕೈಯಾಡಿಸುವ', 'ಎದೆಯನ್ನ, ತೊಳನ್ನ ಕೈಯಿಂದ ನೇವರಿಸುವ', 'ಕೈಯ್ಯನ್ನ ತೊಡೆಯ ಬೆಚ್ಚನೆಯಲ್ಲಿ ಅದುಮಿ ಮುತ್ತಿಡುವ, ಒದ್ದೆಗೊಳ್ಳುವ, ಕೈಯ ಆರ್ದ್ರತೆಯದ್ದು : ಸದ್ದಿಲ್ಲದೆ ಒದ್ದೆಯಾಗುವ ಮುದ್ದಿನದ್ದು ; ಜೀವದ್ದು, ಜಿನುಗುವ ತೇವದ್ದು : ಕಾಮೇಂದ್ರಿಯಗಳ ಕಚ್ಚು-[illegible]: ಪ್ರೇಮಾಂಗಗಳ ಮುಟ್ಟು-ಮುದ್ದು ಆದದ್ದು.

ಅದಕ್ಕೇ ಅದು ಕೈಬೆರಳುಗಳ, ತೋಳು ತೊಡೆಗಳ ಮುಟ್ಟುವ, ಮುತ್ತಿಡುವ ಪ್ರೇಮ ವಾತ್ಸಲ್ಯದ ದಶಾವತಾರದ್ದು : ಕೈಯ ಕೈಯಾರೆ ಕಾಯಕದ್ದು, ಅಕ್ಕರೆಯದ್ದು.

ದುಃಖವು ಪ್ರೀತಿಯಾಗಬಲ್ಲದೇ ? ಕಣ್ಣೀರು ಸುಖವಾಗಬಲ್ಲದೇ ?

"ಸುಶೀ, ಈ ಕಣ್ಣೀರಿನ ಸುಕ ಉಣ್ಣಾಕೆ ನನ್ನಾಸೆ ಪಟ್ಯಾ" (455)

ಹೌದು : 'ಕಣ್ಣೀರು' ಹೇಗೆ 'ಸುಕ'ವಾಗಬಲ್ಲುದು, ಅದನ್ನ 'ಉಣ್ಣು'ವುದು ಹೇಗೆ 'ಆಸೆ'ಯಾಗಬಲ್ಲದು—ಅದರ ಅನುಭವ ಸಾಕ್ಷಾತ್ಕರಣವೇ ಭುಜಂಗಯ್ಯನ ದಶಾವತಾರಗಳು : ಅದರ ಒದ್ದೆಯ ಅನುಭವವೇ "ಸುಶೀ".

## - ಪ್ರಶ್ನೆ -

ಉತ್ತರಿಸಲಾಗದ ಪ್ರಶ್ನೆ
ತಲೆ ಹಿಡುಕು ?
ಆದರೂ ಬೇಕು ಈ
ಎರಡಕ್ಷರದ ಹುಡುಕಾಟಕ್ಕೆ
ಮೂರಕ್ಷರದ 'ಬ-ದು-ಕು'
ಹಂತ ಹಂತವಾಗಿ ನಡೆದಿದೆ ಹುಡುಕಾಟ
ಮೂಲ ಮನುವಿನ ಬೀಜ,
ಕರ್ಮ ಧರ್ಮಗಳ ಹಾದಿ ಸವೆಸಿ,
ವೇದ ಪುರಾಣಗಳ ಉಡುಗೆಯೊಳ ತೂರಿ,
ಹೊತ್ತು ಬಂದಿದೆ 'ಪ್ರಶ್ನೆ'ಯ ಭಾರ.
ನಡೆದಿದೆ ಹುಡುಕಾಟ !

ನೂರು ಹೃದಯಗಳ ಹೊಕ್ಕು,
ಕಡಲುಬ್ಬರವೆಬ್ಬಿಸಿ, ಉದಯ ಭಾಸ್ಕರನಂತೆ

ಕೆಂಪಗೆ ಮೇಲೆದ್ದೂ, ಮೋಡಗಳಂತೆ
ತೃಪ್ತಿತೆ ಪಡೆದು ; ಒಂಟಿ ಹಕ್ಕಿಯಂತೆ
ಹಾರುತಿದೆ ಎಲ್ಲೆಲ್ಲೂ ;
'ಪ್ರಶ್ನೆ'
ನಡೆದಿದೆ ಹುಡುಕಾಟ !

ಹೊಸ ಆಯಾಮಗಳ ಕಡೆಗೆ,
ಹೊಸ ದೃಷ್ಟಿಗಳ ಎಡೆಗೆ ;
ಹಾರುವ ತಟ್ಟೆಗಳಾಗಿ, ತಣ್ಣಗಾಗುತ್ತಿರುವ
ಸೂರ್ಯನಾಗಿ, ಸಮುದ್ರದೊಳಗಿನ ಬೆಂಕಿಯಾಗಿ,
ಬಣ್ಣದ ಗಾಜಿಗೆ ಕಾಡುತಿದೆ—'ಪ್ರಶ್ನೆ'
ನಡೆದಿದೆ ಹುಡುಕಾಟ !

ಕೀಳಲಾಗದ ಭ್ರಮೆಯ ಕನ್ನಡಿಯ ಹಿಂದೆ
ಅಡಗಿರುವ ಹಕ್ಕಿ ಹಾರಿಹೋಗುವ ತನಕ
ನಡೆದಿದೆ ಹುಡುಕಾಟ !

ಒಮ್ಮೆ ಹಾರಿಹೋದ ಹಕ್ಕಿ
ಮತ್ತೆ ಬಾರದು ಮರಳಿ,
ತತ್ತಿ ಒಡೆದು—ಮರಿ ;
ರೆಕ್ಕೆ ಪುಕ್ಕಗಳು ಚಿಗುರಿ ;
ಹಿಂಬಾಲಿಸುವುದು ತಾಯ ಗೂಡಿಗೆ
ಹುಡುಕಾಟದಲ್ಲಿ ?
'ಇರುವಿಕೆ'ಗೆ ಈ ಹುಡುಕಾಟವೇ ಸಾಕ್ಷಿ
ಈ 'ಹುಡುಕಾಟ'ಕ್ಕೆ ಇರುವಿಕೆಯೇ ಸಾಕ್ಷಿ
ಬೀಜ-ಮರದ ಸತ್ವ (?)

ಇದು ಶಾಶ್ವತ—
ಪ್ರಶ್ನೆಯಂತೆ ಹುಡುಕಾಟ ;
ಹುಡುಕಾಟದಂತೆ ಪ್ರಶ್ನೆ

—ಮನಸ್ವಿ ಜಿ. ಸಾಗರ

# ಚೀನಿ ವಿರಹ ಗೀತೆಗಳು

## ನಿರೀಕ್ಷೆ

ಹಿಮ ದಟ್ಟ, ನದಿ ಅಗಲ
ಸುದ್ದಿ ಅವನಿಗೆ ತಲುಪುವ ಮಾರ್ಗವಿಲ್ಲ.
ನೀಲಿ ಆಕಾಶದ ಮೋಡಗಳಾಚೆ ಚಂದ್ರನ
ಬೆಳಕು ವಿರಹತಪ್ತ ಜೋಡಿಯ ಮೇಲೆ
ದಿನವಿಡೀ ನೆನಪು ಕೊರೆದು ಹೃದಯ ಛಿದ್ರ
ನನ್ನ ದುಃಖಪೂರಿತ ಹುಬ್ಬು ತೆರೆಯಲಾರದ ಬೀಗದಂತೆ
ಕನಸಿನಲ್ಲಿ ಅವನ ಚೇತನ ಬರುವ ನಿರೀಕ್ಷೆಯಲ್ಲಿ
ಪ್ರತಿ ರಾತ್ರಿ ಅರ್ಧ ಹಾಸಿಗೆ ಬಿಡುತ್ತೇನೆ. (ಮೂಲ : ಲೀಪೊ)

## ನೊಂದ ಭಾವನೆಗಳಿಗೆ

ಟೊಂಗೆಯ ತುದಿಯಲ್ಲಿ ವಿಧೇಯ ಗಾಳಿಯ ತಡೆ
ಕಾಣುವೆ ಸಂಜೆ ಕಾಗೆಗಳ ಹಾರಾಟ
ಮತ್ತೊಮ್ಮೆ ಮಬ್ಬು
ಹಿಡಿಯುವೆ ಬಾಗಿಲು ಮುಚ್ಚಿ ಬೈಗಿನ ಬೆಳಕು

ನದಿಯ ದಕ್ಷಿಣಕ್ಕೆ ಅಪರಿಚಿತ ಹಾದಿಯಲ್ಲಿ ನನ್ನ ಸ್ವಾಮಿ ತೆರಳಿದ್ದಾರೆ
ಸುದ್ದಿಯಿಲ್ಲ ಅವರಿಂದ
ದುಃಖವೇ ಸುದ್ದಿ
ಬೇಗ ನಿದ್ದೆಗೆ ಕಳಿಸುವ ಚಳಿಗಾಳಿ
ಒಂಟಿ ದೀಪ ನೋಡಲು ನಡುಕ (ಮೂಲ : ಚೌ ಪಾಂಗ್-ಯೆನ್)

## ಹಂಬಲ

ಪಾಳು ಭೂಮಿಯ ನಾಲ್ಕು ಮೂಲೆಗಳಾಚೆ ಕಣ್ಣುಗಳ ಅಲೆದಾಟ
ಕಾಯುತ್ತೇನೆ ಒಬ್ಬನೇ
ಶುಭ್ರ ಝರಿಯ ಪಕ್ಕ ಹೂ ಗಿಡಗಳು

ಎ.ಆರ್. ನಾಗಭೂಷಣ, 1235 ಕೆ.ಎಂ. ಪುರಂ, ಮೈಸೂರು-570004

ಹಸಿರು ದ್ವೀಪಗಳ ಮೇಲೆ ಹೂ ರಾಶಿ
ನನ್ನ ಪ್ರಿಯೆ ಇಲ್ಲಿಲ್ಲ–
ಕಿತ್ತು ಯಾರಿಗೆ ಮುಡಿಸಲಿ ?
ಗೂಡೊಳಗಿನ ಪಕ್ಷಿಗೆ ಗೊತ್ತು ಗಾಳಿಯ ಚಳಿ
ಗುಹೆಯೊಳಗಿನ ಪ್ರಾಣಿಗೆ ಗೊತ್ತು ಸೂರ್ಯನಿರದ ಮಳೆ
ಅಗಲಿಕೆ ಸಹಿಸದವಗೆ
ತಿಳಿವುದೇ ಪ್ರೇಮದ ಹಂಬಲ ? (ಮೂಲ : ಥಾಂಗ್ ಹುವಾ)

## ಹೆಂಡತಿಯ ಭಾವನೆಗಳು

ತೇಲುವ ಮೋಡಗಳು ಎಷ್ಟೊಂದು !
ನನ್ನ ಸಂದೇಶ ಅವುಗಳೊಡನೆ ಕಳಿಸುವಂತಿದ್ದರೆ........
ತೇಲಿ ತೇಲಿ ಹೋಗುತ್ತಿವೆ, ಏನೂ ಕಳಿಸುವಂತಿಲ್ಲ
ಇಲ್ಲಿ ಕಾದು ಕೊರಗುವುದು ವ್ಯರ್ಥ
ಇತರರು ಅಗಲಿದರೂ ಒಂದಾಗುತ್ತಾರೆ
ನಿಮಗೆ ಮಾತ್ರ ಹಿಂದಿರುಗುವ ದಿನವಿಲ್ಲ

ಸ್ವಾಮಿ, ನೀವು ಹೋದ ಮೇಲೆ
ನನ್ನ ಹೊಳೆವ ಕನ್ನಡಿ ಮಂಕಾಗಿದೆ
ನಿಮ್ಮ ಕುರಿತ ನನ್ನ ಭಾವನೆಗಳು ಹರಿವ ನೀರಂತೆ,
ಅದಕ್ಕೆ ಕೊನೆ ಉಂಟೆ ? (ಮೂಲ : ಹ್ಸು ಕನ್)

## ಹೆಂಡತಿಯ ಭಾವನೆಗಳು ಪದ್ಯದ ಅನುಕರಣೆ

ಸ್ವಾಮಿ, ನೀವು ಹೋದ ಮೇಲೆ
ನನ್ನ ಚಿನ್ನದ ಕುಮಟಿಯಲ್ಲಿ ಸುವಾಸನೆಯಿಲ್ಲ
ನಿಮ್ಮ ಯೋಚನೆಯಲ್ಲಿ ನಾನು
ಮಧ್ಯ ರಾತ್ರಿಯಲ್ಲಿ ವ್ಯರ್ಥವಾಗಿ ಉರಿದು ಕರಗುವ ಪ್ರಜ್ವಲ ಮೊಂಬತ್ತಿ
ಯಂತೆ. (ಮೂಲ : ವಾಂಗ್ ಜಂಗ್)

ಸ್ವಾಮಿ, ನೀವು ಹೋದ ಮೇಲೆ
ಮಾಸಿ ಹೋಗುತ್ತಿರುವ ಮುಗ್ಗವನೊಡ್ಡರೆಸಿಲ್ಲ

ನಿಮ್ಮ ಯೋಚನೆಯಲ್ಲಿ ನಾನು
ರಾತ್ರಿಯಲ್ಲಿ ಕರಗಿ ಹೊಳಪ್ಪುಕಳೆದುಕೊಳ್ಳುವ ಹುಣ್ಣಿಮೆಯ ಚಂದ್ರನಂತೆ.
(ಮೂಲ : ಥಾಂಗ್ ಛಿಯು-ಲಿಂಗ್)

## ಪ್ರಿಯತಮೆಗೆ

ದೋಣಿ ಹತ್ತಿ ತೀರ ಬಿಡುವಾಗ
ಥಟ್ಟನೆ ತೇಲಿ ಬಂತು ಪಾದದ ತಾಳದೊಡನೆ ನಿನ್ನ ಹಾಡು
ಸಾವಿರ ಅಡಿ ಈ ಕೊಳದಾಳ
ಆದರೆ ನಿನ್ನ ಬೀಳ್ಕೊಡುಗೆಯ ಪ್ರೇಮದಷ್ಟಲ್ಲ, (ಮೂಲ : ಲೀ ಪೋ)

— o —

(ರಾಬರ್ಟ್ ಕೊತ್‌ವಾಲ್ ಮತ್ತು ನಾರ್ಮನ್ ಸ್ಮಿತ್ ಅವರು ಅನುವಾದಿಸಿರುವ "ಚೈನೀಸ್ ವರ್ಸ್" (Chinese verse) ಎಂಬ ಪುಸ್ತಕದಿಂದ ಮೇಲಿನ ಏಳು ಪದ್ಯಗಳನ್ನು ಆರಿಸಿ ಅನುವಾದಿಸಲಾಗಿದೆ.) —ಎ.ಆರ್. ನಾಗಭೂಷಣ,

## ಬದುಕಿದ್ದೇನೆ

ನಾನು ಬದುಕಿದ್ದೇನೆ
ಯಾಕೆಂದರೆ - ಇನ್ನು ಸತ್ತಿಲ್ಲ.
ಬದುಕಿದ್ದೇನೆ ನಾನು
ಹೇಗೆಂದರೆ, ನಿಮ್ಮ ನನ್ನ ಹಾಗೆಲ್ಲ !
ನನ್ನ ಹಾಗೆ
ದಿನಚರಿ : ಸುತ್ತುವುದು
ಸುತ್ತಾಡುವುದು - ಒಂದಷ್ಟು
ಗಂಟುಗಳ ಬಿಚ್ಚುವುದು
ಸುಸ್ತಾದಾಗ ಖಾಲಿ ಹಾಸಿಗೆಯ
ಅಪ್ಪುವುದು
ಪರಿಸರ...ಅಸ್ಪಷ್ಟ -ಅದ್ಭುತ

ಕೆಲವೊಮ್ಮೆ ಅಗೋಚರ
ಉಂಟು ಬದುಕುತ್ತಿವೆ
ನನ್ನ ಸುತ್ತ ಹಾವುಗಳು
ಮುಂಗಸಿಗಳು - ನಾಯಿ ಮತ್ತು ಹರಿಗಳು
ಒಮ್ಮೊಮ್ಮೆ ಕಾಣುತ್ತೇನೆ-
ಮನುಷ್ಯರಂತೆಕಾಣುವ ಕೆಲವು ವ್ಯಕ್ತಿಗಳು
ಕ್ಷಣ ಹೊರಳಿರೆ, ಮಿಂಚುತ್ತವೆ
ಮಿಂಚಿ ಮಾಯವಾಗುತ್ತವೆ.
ನಾನು ಬದುಕಿದ್ದೇನೆ
ಯಾಕೆಂದರೆ ಸತ್ತಿಲ್ಲ.

—ಬಿ. ಫಾಲಾಕ್ಷಯ್ಯ

---

ಬಿ. ಫಾಲಾಕ್ಷಯ್ಯ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು-9

## ಕ ನ ಸು

ಮಾಗಿಕಾಲದ ಆ
ಸರಿರಾತ್ರಿಯಲ್ಲಿ
ಮರೆಯಲಾಗದ
ಒಂದು
ಕನಸ ಕಂಡೆ....
ಕತ್ತಲಾವರಿಸಿರುವ
ಗೋರಿ ಮನೆಗಳ ಕಂಡು !
ಸುತ್ತಲೂ ಸುಳಿಯುತಿಹ
ಪ್ರೇತ ಮನುಜರ ಕಂಡು !!
ಬೆಚ್ಚಿ....ಬೆವರುತ....
ನಾ,
ಓ-ಡೋ ಡಿ
ಕಾನನಕ್ಕೆ ಬಂದೆ....
ತಿಂಗಳಲಿ ತೊಯ್ದಿದ್ದ
ಕಾನನದ ಸೊಬಗಿಂದ
ಹುಚ್ಚೆದ್ದ ಮನ ಕುಣಿದು
ನಲಿಯುವಾಗ__
ಎತ್ತಲಿಂದಲೋ ಬಂದ
ದನಿಯು—
ನಾ-ಲಿಸಿ ನಿಂತೆ

ಪ್ರಿಯಕರನ ದನಿಯದುವೆ !
ಕ್ಷಣದಲ್ಲೇ ಅರಿತೆ
ದನಿಯೊಡೆಯನಿಲ್ಲೆಂದು
ಅಲ್ಲೆಲ್ಲಾ ಅಲೆದಲೆದು
ಏಕಿಂತು ಕಾಡುವನು-
-ಎಂದು ಜರಿದೆ.
ಹತ್ತಿರಕೆ ಬಂದ ದನಿ
ಕೂಗಿ ಕರೆದಂತಾಗೆ
ಹಿಂತಿರುಗಿ ನೋಡಲು
ಅಯ್ಯೋ !!!
ನಾ ಕಂಡುದೇನು ?
ಪ್ರೇತ ಛಾಯೆಯು
ನನ್ನ
ಸನಿಹ ಸರಿಯುತ್ತಿರಲು,
ಭಯಕೆ
ತೆ-ರೆ-ದಾ-
ಬಾಯಿ 'ಹಾ' ಎಂದು
ಚೀರಲು,
ಕನಸ ತಿಳಿದೆದ್ದ-ನಾ
–ನಡುಗುತಿದ್ದೆ.

—ಹೆಚ್. ಪ್ರೇಮಲೀಲ

ಹೆಚ್. ಪ್ರೇಮಲೀಲ, ಮಾಯಸಂದ್ರ ಮಾರ್ಗ, ತುಮಕೂರು ಜಿಲ್ಲೆ, ಕಲ್ಕೆರೆ-572221

ನಾಟಕ ವಿಮರ್ಶೆ

# ಒಂದು ಲೋಕ ಕಥೆ

—ವಿಜಯಶ್ರೀ ಸಬರದ

ಪ್ರಸನ್ನ ಅವರ 'ಒಂದು ಲೋಕಕಥೆ' ನಾಟಕವನ್ನು ಬೀದರದಲ್ಲಿ ಈ ತಿಂಗಳು 8 ಹಾಗೂ 9ರಂದು ಎರಡು ದಿನ ಪ್ರದರ್ಶಿಸಲಾಯಿತು. ಕರ್ನಾಟಕ ನಾಟಕ ಅಕಾಡೆಮಿಯಿಂದ ನಡೆದ ಬೀದರದ ರಂಗಶಿಬಿರದ ಶಿಬಿರಾರ್ಥಿಗಳಿಂದ ಈ ನಾಟಕ ಪ್ರಯೋಗವಾಯಿತು. ಎನ್ ಎಸ್.ಡಿ. ಪದವೀಧರ ಸಿ. ಬಸವಲಿಂಗಯ್ಯನವರ ಸಮರ್ಥ ನಿರ್ದೇಶನದಲ್ಲಿ ನಾಟಕ ಹೊಸ ಆಯಾಮ ಪಡೆಯಿತು. ಬೆಂಗಳೂರಿನ ನಿವಾಸಿಯಾದ ಬಸವಲಿಂಗಯ್ಯ ರಂಗಚಳುವಳಿಗೆ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡವರು. ಎಡಪಂಥೀಯ ವಿಚಾರಧಾರೆಗೆ ಬದ್ಧರಾಗಿರುವ ಈ ನಿರ್ದೇಶಕ 'ಒಂದು ಲೋಕಕಥೆ'ಯಲ್ಲಿ ತಮ್ಮ ಪ್ರತಿಭೆಯನ್ನು ಸಾಬೀತು ಪಡಿಸಿದರು.

ಬೆಂಗಳೂರಿನವರಾದರೂ ಹೈದ್ರಾಬಾದ್ ಕರ್ನಾಟಕ-ವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಂಡಿರುವ ಈ ನಿರ್ದೇಶಕರ ಈಗಾಗಲೇ ಸಿಂಧನೂರು, ರಾಯಚೂರು, ಹರಪನಹಳ್ಳಿ ಗುಲಬರ್ಗಾ, ಬೀದರಗಳಲ್ಲಿ ಜೋಗತಿಕಲ್ಲು, ಏಕಲವ್ಯ, ತದ್ರೂಪಿ, ಅರಾಮು, ಸತಿಯೊಡನೆ ಸಹಗಮನ, ಈರೋಬಿ, ಗೋದಾನ ಈ ಮುಂತಾದ ನಾಟಕಗಳನ್ನು ಸಮರ್ಥವಾಗಿ ನಿರ್ದೇಶಿಸಿ ಇಲ್ಲಿಯ ರಂಗಚಳುವಳಿಗೆ ಕ್ರಿಯಾಶೀಲತೆಯನ್ನು ಒದಗಿಸಿಕೊಟ್ಟಿದಾರೆ.

ಇಂಡಿಯಾದ ಪ್ರತಿಭಾವಂತ ಚಲನಚಿತ್ರ ನಿರ್ದೇಶಕರಾದ ಮಣಿಕೌಲ್ ಅವರ 'ದುವಿಧಾ' ಚಲನಚಿತ್ರದ ಕಥೆಯನ್ನು ಆಧರಿಸಿ ರಚಿತವಾದ ನಾಟಕ ಇದು. ರಾಜಸ್ತಾನದ ಜಾನಪದ ಕಥೆಯೊಂದು ಇದಕ್ಕೆ ಮೂಲ. ಈ ನಾಟಕ ಈಗಾಗಲೇ ಪ್ರಸನ್ನ ಅವರ ನಿರ್ದೇಶನದಲ್ಲಿ ಪ್ರಯೋಗಗೊಂಡಿದೆ. ಆದರೆ ನಿರ್ದೇಶಕ ಬಸವಲಿಂಗಯ್ಯ ಈ ನಾಟಕದಲ್ಲಿ ಅನೇಕ ಹೊಸ ಅಂಶಗಳನ್ನು ಸೇರಿಸಿದ್ದಾರೆ. ಡಾ. ಬಸವರಾಜ ಸಬರದ ಅವರ ಏಳು ಹಾಡುಗಳನ್ನು ತೆಗೆದುಕೊಂಡು ಜಾನಪದ ಧಾಟಿಯ ರಾಗ ಸಂಯೋಜನೆ ಮಾಡಿ, ಹಿಮ್ಮೇಳವನ್ನು ಸೃಷ್ಟಿಸಿದ್ದಾರೆ. ಈ ನಾಟಕದಲ್ಲಿ ಬರುವ ಅಲದಮಾರಕ್ಕೆ ಬದ

---

ವಿಜಯಶ್ರೀ ಸಬರದ ಕನ್ನಡ ಉಪನ್ಯಾಸಕಿ "ಪಲ್ಲವಿ" ಕೆ.ಇ.ಬಿ. ರಸ್ತೆ ಬೀದರ 585401

ಲಾಗಿ ; ನಟರನ್ನೇ ಆಲದಮರದಂತೆ ಉಪಯೋಗಿಸಿಕೊಂಡಿದ್ದಾರೆ. ನಾಟಕದ ಮೂಲ ಆಶಯವನ್ನು ಇವರು ಸಂಯೋಜಿಸಿದ ಹಾಡುಗಳು ತುಂಬಾ ಪರಿಣಾಮಕಾರಿಯಾಗಿ ಹೇಳುತ್ತವೆ.

ಒಂದು ಕಡೆ ಸ್ವಾರ್ಥ-ಅತಿಯಾಸೆ ಇವುಗಳ ಪ್ರತಿನಿಧಿಯಾಗಿ ಸೇಟಜಿ; ಮತ್ತೊಂದು ಕಡೆ ಸಂಪ್ರದಾಯಶಕ್ತಿ ಇದರ ಪ್ರತೀಕವಾಗಿ ಹಳ್ಳಿಯಜನ ಬರುತ್ತಾರೆ. ಇವೆರಡರ ನಡುವೆ ಪ್ರೀತಿದ್ಯೋತಕವಾಗಿ ಕಾಲ್ಪನಿಕ ಭೂತ ಬರುತ್ತದೆ. ಸ್ವಾರ್ಥದಿಂದ ಮೂಡಿದ ರಾಕ್ಷಸ ಪ್ರವೃತ್ತಿ ; ಸಂಪ್ರದಾಯ ಜಡತೆಯಿಂದ ಮೂಡಿದ ತಾಮಸ ಪ್ರವೃತ್ತಿ ಇಂಥ ಸಾಮಾಜಿಕ ವಿಷಮತೆಯ ಪರಿಸರದಲ್ಲಿ ಮಾನವೀಯತೆ ನಾಶವಾಗಿರುವುವನ್ನು ಕಂಡು ಕೊಳ್ಳಲು ಇಲ್ಲಿ ಜನಪದ ಕಥೆಯ ಕಲ್ಪಕತೆಯನ್ನು ದುಡಿಸಿಕೊಳ್ಳಲಾಗಿದೆ.

ಸೇಟಜಿಯಂತಹ, ಹಣದ ಭೂತಗಳ ಸ್ವಾರ್ಥ-ಮೋಸಗಳನ್ನು ವಿವರಿಸುತ್ತಾ ಭೂತದಂತಹ ಜಡವಸ್ತುವಿನ ಮುಖಾಂತರ ಬದುಕಿನಲ್ಲಿ ಜೀವನ ಪ್ರೀತಿಯನ್ನು ಹುಟ್ಟು ಹಾಕುತ್ತಾರೆ. ಶತಮಾನಗಳಿಂದ ಕಳೆದುಕೊಂಡ ಮೂಕಿಯಾದ ಸ್ತ್ರೀ ಇಲ್ಲಿ ತನ್ನ ಸಹಜ ಬಯಕೆಗಳಿಗೆ ಮೌನ ಸಮ್ಮತಿ-ಕೊಡುವುದರ ಮೂಲಕ ಸ್ಫೋಟಿಸಿದ್ದಾಳೆ. ಸೇಟಜಿಯ ಸೊಸೆ ತನ್ನ ಗಂಡ ಮದುವೆಯಾದ ದಿನವೇ ದುಡ್ಡುಗಳಿಸಲೆಂದು ದೂರದೂರಿಗೆ ಹೋದರೆ, ತಾನು ಮಾವ ಸೇಟಜಿಯು ಹೇಳಿದಂತೆ ಸುಪ್ತ ಬಯಕೆಗಳನ್ನು ಹತ್ತಿಕ್ಕಿ ಕೊಂಡು ಮೌನಿಯಾಗುತ್ತಾಳೆ. ಆಲದ ಮರದ ಕಾಲ್ಪನಿಕ ಭೂತ ಸೇಟಜಿಯ ಮಗನ ವೇಷಹಾಕಿಕೊಂಡು ಸೇಟಜಿಗೆ ಚಿನ್ನದ ನಾಣ್ಯಗಳ ಆಸೆ ತೋರಿಸಿ ಸೇಟಜಿಯ ಸೊಸೆಯ ಹತ್ತಿರ ಬಂದು ತನ್ನ ನಿಜ ಸ್ಥಿತಿಯನ್ನು ಹೇಳುತ್ತದೆ. ಆಗ ಸೇಟಜಿಯ ಸೊಸೆಗೆ ಹಣದ ಅತ್ಯಾಸೆಯಿಂದ ದೂರ ಹೋದ ಗಂಡನಿಗಿಂತ, ಪ್ರೀತಿ ಭಿಕ್ಷೆ ಕೇಳುವ ಭೂತವೇ ಶ್ರೇಷ್ಠ ಎಂದನ್ನಿಸಿ ಭೂತದೊಡನೆ ಪ್ರೀತಿಸಿ ಗರ್ಭಧರಿಸುತ್ತಾಳೆ. ಕೊನೆಗೆ ಈ ವಿಷಯ ಸೇಟಜಿ ಮಗನಿಗೆ ತಿಳಿದು ವಿಷಯವೆಲ್ಲಾ ಬಯಲಾದಾಗ ಆತ ತನ್ನ ಹೆಂಡತಿಯನ್ನು ತಿರಸ್ಕರಿಸದೆ, ಭೂತ ಕೊಟ್ಟು ಹೋದ ಚಿನ್ನದ ನಾಣ್ಯದಾಸೆಗಾಗಿ ಮತ್ತೆ ಆಕೆಯನ್ನೇ ಮದುವೆ ಮಾಡಿಕೊಂಡು ಮನೆತನದ ಗೌರವ ಕಾಪಾಡಲು ಪ್ರಯತ್ನಿಸುತ್ತಾನೆ. ಕಾಲ-ಭಾಷೆಗಳ ಗಡಿ ದಾಟಿ ಮಾನವೀಯ ಮೌಲ್ಯಗಳನ್ನು ಸ್ಮರಿಸುವದರಿಂದ ನಾಟಕ ಇಂದಿಗೂ ಪ್ರಸ್ತುತವಾಗುತ್ತದೆ.

ಬಸವಲಿಂಗಯ್ಯನವರು ಈ ನಾಟಕದಲ್ಲಿ ತುಂಬಾ ಶ್ರಮಿಸಿದ್ದಾರೆ. ಮೂವತ್ತು ಜನ ಕಲಾವಿದರಿರುವ ಈ ನಾಟಕವನ್ನು ಯಶಸ್ವಿಗೊಳಿಸಿದ್ದಾರೆ. ಎಲ್ಲ ನಟ-ನಟಿಯರು ತುಂಬಾ ಪರಿಣಾಮಕಾರಿಯಾಗಿ ಅಭಿನಯ ನೀಡಿದ್ದಾರೆ. ಇಲ್ಲಿನ ಹಾಡುಗಳಂತೂ ಹಸಿರಾಗಿ ನಿಲ್ಲುತ್ತವೆ. ಬೀದರದ ಜನತೆಗೆ ಬಹಳ ದಿನಗಳ ನಂತರ ಇಂತಹ ನಾಟಕ ನೋಡುವ ಅವಕಾಶ ಸಿಕ್ಕಿತು. ಅದಕ್ಕಾಗಿ ನಾಟಕ-ಅಕಾಡೆಮಿಯವರಿಗೆ, ನಿರ್ದೇಶಕರಿಗೆ ಅಭಿನಂದನೆ ಸಲ್ಲಬೇಕು.

# ಒಳನೋಟ

ಪ್ರೀತಿಯ ಶೂದ್ರ ಶ್ರೀನಿವಾಸ್,

ನೆನಪುಗಳು ಹೇಗಿದ್ದೀರಿ ? ರಾಮಚಂದ್ರದೇವರ ಲೇಖನ ಓದಿದೆ. ಅದ್ಭುತವಾಗಿದೆ. ಚಂದ್ರಗುತ್ತಿಯಲ್ಲಿ ಬೆತ್ತಲೆ ಸೇವೆಯನ್ನು ವಿರೋಧಿಸುವ ಮೂಲಕ ಮಹಿಳಾ ಸಂಘಟನೆಗಳು ಹಾಗೂ ದಲಿತ ಸಂಘರ್ಷ ಸಮಿತಿಗಳು ದಲಿತ ವಿರೋಧಿ ನಿಲುವನ್ನು ತಳೆದಿವೆ.

ಗೋವಾ ಬೀಚಿನಲ್ಲಿ ಹುಣ್ಣಿಮೆಗೆ ಮೈಯೊಡ್ಡಿ ಬೆತ್ತಲೆ ಅಲೆಯುವ ಕ್ರೌಂಚಗಳನ್ನು ವಿರೋಧಿಸದ, ಬೆಂಗಳೂರು ಮುಂಬಯಿಗಳ ಅಸಹ್ಯಕರ ಕ್ಯಾಬರೆಯನ್ನು ವಿರೋಧಿಸದ ಈ ಜನ ದಲಿತರು ನಡೆಸುವ ಬೆತ್ತಲೆ ಸೇವೆಯನ್ನು ವಿರೋಧಿಸಿದರು; ಎತ್ತು ಈದಿತ್ತು ಎಂದರೆ ಕೊಟ್ಟಿಗೆ ಕಟ್ಟಿದಂತೆ.

ಇದೆಲ್ಲಾ ಪಾಶ್ಚಾತ್ಯ ರ್‍ಯಾಷನಲಿಸ್ಟ್ ವಿಚಾರಧಾರೆಗಳನ್ನು ಒಪ್ಪಿಕೊಂಡದ್ದರ ಕೆಟ್ಟ ಪರಿಣಾಮ. ನಮ್ಮ ಚರ್ಮಗಳನ್ನೇ ಸುಲಿದು ಮೂಳೆ ಮಾಂಸದ ತಟಿಕೆ ವಿಂಗಡಿಸುವ ಪರಮಾಣುಶಕ್ತಿಯ ಬಗ್ಗೆ ಸೊಲ್ಲೆತ್ತದ ಈಜನ ರೇಣುಕಮ್ಮನ ಗುಡ್ಡದಲ್ಲಿ ಇಣುಕಿ ನೋಡಲುಹೋಗಿ ತಮ್ಮ ಸುಪ್ತ ಬಯಕೆಗಳನ್ನ ಈಡೇರಿಸಿಕೊಂಡಿದ್ದಾರೆ.

ಬೆತ್ತಲೆಸೇವೆ ತಪ್ಪಾದರೆ, ಯುದ್ಧವನ್ನ ತಿರಸ್ಕರಿಸಿ ಬೆತ್ತಲೆ ನಿಂತ ಬಾಹುಬಲಿ ಅವನ ತೋಳುಗಳ ಮೇಲೆ ಹಬ್ಬಿದ ತರುಲತೆಗಳ ಬಗ್ಗೆ ಏನು ಹೇಳುತ್ತಾರೋ ಈಜನ? ಆಧುನಿಕತೆ ಹಾಗೂ ಸಂಪ್ರದಾಯಶೀಲತೆ ಎರಡರ ಬಗ್ಗೆಯೂ ನಾವು ಅನುಮಾನಗಳನ್ನು ಬೆಳಸಿಕೊಳ್ಳಬೇಕಿದೆ.

ಪ್ರೀತಿಯ ವಂದನೆಗಳು,
**ಗೌರಿ ಎಸ್. ಗೌಡ**
ವಿದ್ಯಾರ್ಥಿನಿ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್.

ಆತ್ಮೀಯರೆ,

ಅಕ್ಟೋಬರ್ 84ರ 'ಶೂದ್ರ' ಓದಿದೆ. ತುಂಬಾ ಆಕರ್ಷಕವಾಗಿ ಮತ್ತು ಗಟ್ಟಿಯಾಗಿ ಬಂದಿದೆ. ರಾಮಚಂದ್ರದೇವ, ಎಸ್. ಎಸ್. ಹಿರೇಮಠರ ಲೇಖನಗಳು ಅರ್ಥವತ್ತಾಗಿವೆ. ವಾಲೀಕಾರರ ಹಾಡು ಸೊಗಸಾಗಿದೆ.

**ವಿಜಯಶ್ರೀ ಸಬರದ**
ಬೀದರ್.

**ಬಾಣ ಭಟ್ಟನ ಕಾದಂಬರಿ**— ಬನ್ನಂಜೆ ಗೋವಿಂದಾಚಾರ್ಯ (ಎರಡನೆ ಮುದ್ರಣ) ನಾವು ಓದಲೇಬೇಕಾದ ಪುಸ್ತಕ. ಸುಲಲಿತವಾದ ಓದಿಗೆ ಕಾರಣವಾಗಿರುವ ಪುಸ್ತಕ. ಇಂಥ ಪುಸ್ತಕವನ್ನು ಕನ್ನಡಕ್ಕೆ ನೀಡಿದ್ದಕ್ಕೆ ಬನ್ನಂಜೆಯವರಿಗೆ ಶೂದ್ರ ತಡವಾಗಿ ಅಭಿನಂದಿಸುತ್ತಿದೆ.

**ಸಾಹಿತ್ಯ ಸಂಪರ್ಕ**— ಟಿ.ಪಿ. ಅಶೋಕ್, (ವಿಮರ್ಶೆಯ ಲೇಖನಗಳು) ಅಶೋಕ್ ಈಗಾಗಲೇ ವಿಮರ್ಶೆಯಲ್ಲಿ ಹೆಸರು ಮಾಡಿರುವ ವ್ಯಕ್ತಿ. ವಿಮರ್ಶೆಯ ಕ್ಷೇತ್ರಕ್ಕೆ ಹೊಸದೇನನ್ನಾದರೂ ಕೊಡುವ ತುಡಿತವನ್ನು ಗಾಢವಾಗಿ ಬೆಳೆಸಿಕೊಂಡಿರುವ ವ್ಯಕ್ತಿ. ಪ್ರಸ್ತುತ ಪುಸ್ತಕದ ಲೇಖನಗಳು ಈಗಾಗಲೇ ಅಲ್ಲಲ್ಲಿ ಪ್ರಕಟವಾಗಿದ್ದರೂ ಮತ್ತೆ ಓದಿ ಆನಂದಿಸಬಹುದಾದ ಪುಸ್ತಕ. ನಮ್ಮ ಸಾಹಿತ್ಯ ಸಂದರ್ಭದ ಮಹತ್ತರ ಕೃತಿಗಳ ಬಗ್ಗೆ ಬರೆದಿರುವ ಲೇಖನಗಳು.

**ಮುದ್ರಾ ರಾಕ್ಷಸ** (ನಾಟಕ) ಸಿದ್ಧಲಿಂಗಪಟ್ಟಣ ಶೆಟ್ಟಿ, ಈ ನಾಟಕ ಈಗಾಗಲೇ ಕನ್ನಡ ಸಾಹಿತ್ಯ ಪ್ರೇಮಿಗಳಿಗೆ ಪರಿಚಯವಿರುವ ನಾಟಕ. ಪಟ್ಟಣಶೆಟ್ಟರು ನಮಗೆಲ್ಲ ತಮ್ಮ ಕಾವ್ಯ ಹಾಗೂ ಉತ್ತಮ ನಾಟಕಗಳ ಅನುವಾದದ ಮೂಲಕ ಚಿರಪರಿಚಿತರು. ಸಂಕ್ರಮಣ ಸಾಹಿತ್ಯಕ ಪತ್ರಿಕೆಯಲ್ಲಿ ಬಹಳ ವರ್ಷ ಸಂಪಾದಕ ವರ್ಗದಲ್ಲಿ ದುಡಿದವರು.

**ಅಯಸ್ಕಾಂತ** (ಕವನ ಸಂಕಲನ) ಮಹತ್ತರವಾದ ಕಾವ್ಯ ಸಂಗ್ರಹವಲ್ಲದಿದ್ದರೂ ಓದಿ ಸಂತೋಷ ಪಡಬಹುದಾದ ಸಂಕಲನ. ಈಗಾಗಲೇ ಇವರ ಐದು ಕವನಗಳ ಸಂಗ್ರಹ ಬಂದಿದೆ. ನಮ್ಮ ಕಾವ್ಯಕ್ಷೇತ್ರಕ್ಕೆ ಇವರು ಹೊಸಬರೇನೂ ಅಲ್ಲ.

**ಡೋಮ ಮತ್ತಿತರ ಕಥೆಗಳು** –ಕುಂ ವೀರಭದ್ರಪ್ಪ. ಕುಂ ವೀ. ಈಗಾಗಲೇ ಒಂದಷ್ಟು ಒಳ್ಳೆಯ ಕಥೆಗಳನ್ನು ನಮಗೆ ಕೊಟ್ಟಿದ್ದಾರೆ. ಉತ್ತಮ ಕಾದಂಬರಿಯನ್ನು ಕೊಡಲು ಪ್ರಯತ್ನಿಸಿದ್ದಾರೆ. ಕಥೆ ಬರೆಯುವುದು ಇವರಿಗೆ ತೀವ್ರ ರೀತಿಯ ಕೃಷಿಯಾಗಿರುವುದರಿಂದ ಇತ್ತೀಚೆಗೆ ಹೆಚ್ಚು ಬಿಗಿಯನ್ನು ಕಳೆದುಕೊಳ್ಳುತ್ತಿವೆ ಅನ್ನಿಸುತ್ತಿದೆ. ಕೊನೆಗೂ ಸಂಕಲನವನ್ನು ಓದಿದ ನಂತರ ನಿಮಗೇನನ್ನಿಸುತ್ತದೆಂಬುದು ಮುಖ್ಯ.

**ವಾಲ್ಮೀಕಿ ತೂಕಡಿಸಿದಾಗ** —ಗೌರೀಶ ಕಾಯ್ಕಿಣಿ, ಕಾಯ್ಕಿಣಿಯವರು ನಮ್ಮಲ್ಲಿಯ ಕೆಲವೇ ಪ್ರಜ್ಞಾವಂತ ಚಿಂತಕರಲ್ಲಿ ಒಬ್ಬರು. ಈ ಪುಸ್ತಕವನ್ನು ಓದಿ ಚಿಂತಿಸ

ಬಹುದು. ವಾಲ್ಮೀಕಿಯ ಬಗ್ಗೆ ಮನಸ್ಸು ಬದಲಾಯಿಸಬಹುದು ಮತ್ತೆ ಮಾಮೂಲಿ ಸ್ಥಿತಿಗೆ ಬರಬಹುದು. ಆದರೆ ನಮ್ಮ ಸಂಸ್ಕೃತಿಯ ವಾಲ್ಮೀಕಿ ಹಾಗೆಯೇ ಇರ್ತಾನೆ. ಒಟ್ಟಿನಲ್ಲಿ ಅತ್ಯಂತ ತೂಕದಿಂದ ಗೌರೀಶ ಕಾಯ್ಕಿಣಿಯವರು ಬರೆದಿದ್ದಾರೆ. ಇವರ ಮಗ ಜಯಂತ ಕಾಯ್ಕಿಣಿ ಒಳ್ಳೆಯ ಕಥೆಗಾರ ಮತ್ತು ಕವಿಯೆಂಬುದು ನಮಗೆಲ್ಲ ಗೊತ್ತಿರುವ ವಿಷಯವೇ ಆಗಿದೆ.

ಪ್ರಕೃತ —ಡಿ. ರಘುನಾಥರಾವ್, ಮುಲ್ಕಿಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ. ಈಗಾಗಲೇ ಅಲ್ಲಲ್ಲಿ ಬರೆದು ಪ್ರಕಟಿಸಿದ್ದ ಏಳು ಲೇಖನಗಳು ಈ ಸಂಕಲನದಲ್ಲಿವೆ. ಸಾಹಿತ್ಯದಲ್ಲಿ ಗಂಭೀರವಾದದ್ದು ಬರಬೇಕು ಎಂಬ ಆಶಯವನ್ನು ಹೊಂದಿರುವ ವ್ಯಕ್ತಿ. ಆದರೆ ಇವರೂ ಅಷ್ಟೇ ತಮ್ಮ ಅಭಿಪ್ರಾಯವನ್ನು ಮುಕ್ತವಾಗಿ ಹೇಳುವಾಗ 'ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ' ಬರೆಯುವ ಅಗತ್ಯವಿಲ್ಲ ಅನ್ನಿಸುತ್ತೆ.

ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಆವಿಷ್ಕಾರ: ಸ್ವರೂಪಗಳು -ಬಸವರಾಜ ಕಲ್ಗುಡಿ. ಬೆಂಗಳೂರಿನ ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘ ಬೇಂದ್ರೆಯವರ ಬಗ್ಗೆ ಒಂದಷ್ಟು ಒಳ್ಳೆಯ ಕೆಲಸವನ್ನು ಮಾಡಿದೆ. ಈಗಾಗಲೇ ಕೆ.ವಿ. ನಾರಾಯಣ ಹಾಗೂ ವಿಜಯಾದಬ್ಬೆಯವರ ಪುಸ್ತಕ ಬಂದಿದೆ. ಬಸವರಾಜ ಕಲ್ಗುಡಿ ವಿಮರ್ಶೆಯ ಕ್ಷೇತ್ರದಲ್ಲಿ ಗಂಭೀರವಾಗಿ ಕೆಲಸ ಮಾಡುತ್ತಿರುವ ವ್ಯಕ್ತಿ. ಏನಾದರೂ ಹೊಸದನ್ನು ಹೇಳಬೇಕೆಂಬ ಆಕಾಂಕ್ಷೆಯಿರುವ ಸಾಹಿತ್ಯದ ವಿದ್ಯಾರ್ಥಿ.

ಧಗಧಗಿಸುವ ಆತ್ಮಗಳು —ಬಾ.ಹ. ರಮಾಕುಮಾರಿಯವರು ಪದ್ಯಬಿಟ್ಟು ಲೇಖನ ಬರೆಯುವುದನ್ನು ತಿಳಿದದ್ದು ಈ ಸಂಕಲನವನ್ನು ಕಂಡಾಗಲೇ. ಇವರ ಪದ್ಯಗಳಲ್ಲಿಯ ಲವಲವಿಕೆಯನ್ನು ಮೆಚ್ಚಿಕೊಂಡಿದ್ದೆ. ಪದ್ಯ ಚೆನ್ನಾಗಿ ಬರೆಯಬಲ್ಲರು. ಆದರೆ 'ಧಗಧಗಿಸುವ ಆತ್ಮಗಳು ವಿಷಾದ ಅಥವ ನೋವಿಗಿಂತ ಭಾಷಣಗಳಾಗಿಬಿಟ್ಟಿವೆ. ಹೀಗೆ ಬರೆಯುತ್ತ ಹೋದರೆ ಪದ್ಯ ಬರೆಯುವ ಚೈತನ್ಯವನ್ನು ಕಳಕೊಳ್ಳುವ ಭಯವಿದೆ.

ಬೆಳಗೆದ್ದು ನಿಂತರೆ —ಶ್ರೀಧರ ಪಿಸ್ಸೆಯವರ ಕವನ ಸಂಕಲನ. ಅತ್ಯಂತ ಉತ್ಸಾಹಿ ಕಾವ್ಯ ಪ್ರೇಮಿಯೆನ್ನುವುದು ಅವರ ಮಾತುಗಳಲ್ಲಿಯೇ ತಿಳಿಯುತ್ತೆ. ಆದರೆ ಇದು ಮುಖ್ಯವಲ್ಲ ; ಪದ್ಯ ಚೆನ್ನಾಗಿ ಬರೆಯುತ್ತಾರೆ ಇಷ್ಟೇ ಸಾಕು.

ವ್ಯಕ್ತಿ ಮತ್ತು ವ್ಯಕ್ತ —ಪೇಜಾವರ ಹರಿಯಪ್ಪನವರ ಕವನಸಂಕಲನ. ಆತ್ಮೀಯವಾಗಿ ಹೇಳಬೇಕೆಂದರೆ ಎಷ್ಟು ಮುದ್ದಾಗಿ ಕಾವ್ಯ ಬರೆಯುತ್ತಾರೆ ಅನ್ನಿಸುತ್ತೆ.

ಅತ್ಯಂತ ಮುಕ್ತ ಬಂಧದಲ್ಲಿ ಹೇಳುತ್ತ ಹೋಗುವುದು ನನಗೆ ಖುಷಿಯೆನಿಸಿತು, ಹಾಗೆ ನೋಡಿದರೆ ಇತ್ತೀಚಿಗೆ ನಾನು ಓದಿದ ಉತ್ತಮ ಕವನ ಸಂಕಲನ. ಇದಕ್ಕೆ ಕಡೆಂಗೋಡ್ಲು ಕಾವ್ಯ ಪ್ರಶಸ್ತಿ ಬಂದಿದೆ. ಶೂದ್ರದ ಪರವಾಗಿ ಅಭಿನಂದಿಸುತ್ತೇನೆ.

—ಸಿದ್ಧಾರ್ಥ

ಸಾದರ ಸ್ವೀಕಾರಕ್ಕೆ ಬದಲಾಗಿ 'ವಿಮರ್ಶೆಗೆ ಬಂದ ಪುಸ್ತಕಗಳು-ವಿಮರ್ಶೆಗೆ ಮುನ್ನ' ಎಂಬ ಹೊಸ ಶೀರ್ಷಿಕೆಯನ್ನು ಪ್ರಾರಂಭಿಸುತ್ತಿದ್ದೇವೆ. ಇಲ್ಲಿಯ ಪುಸ್ತಕಗಳ ಬಗ್ಗೆ ಮುಕ್ತ ಮನಸ್ಸಿನಿಂದ ಎರಡು ಮಾತು ಬರೆಯಲು ಗೆಳೆಯ ಸಿದ್ಧಾರ್ಥನನ್ನು ಕೇಳಿಕೊಂಡಿದೆ. ಇಲ್ಲಿ ಬರೆಯುವ ಮಾತುಗಳು 'ಶೂದ್ರ'ದ ಒಟ್ಟು ಅಭಿಪ್ರಾಯವಲ್ಲ. ಈ ಕಾಲಂ ಲವಲವಿಕೆಯಿಂದ ಇರಲಿ ಎಂಬ ಕಾರಣಕ್ಕಾಗಿ ಪ್ರಾರಂಭಿಸುತ್ತಿದ್ದೇವೆ. ಇದರ ಬಗ್ಗೆ ಚರ್ಚಿಸುತ್ತಿರುವಾಗ ಟಿ.ಪಿ. ಅಶೋಕ್ ಉಪಯುಕ್ತ ಸಲಹೆ ನೀಡಿದರು. ಅವರಿಗೆ ಶೂದ್ರ ಋಣಿಯಾಗಿದೆ.

ಸಂ :



# ಕನಸಿಗೊಂದು ಕಣ್ಣು

## ಬದುಕು-ಸಾವು-ಆತ್ಮಹತ್ಯೆ ಇತ್ಯಾದಿ

"Death they passed always over and over
Life grew always sooner and sooner
But love like a grimace
Too real; on life's face
Smiled two terrified dreams of Tilla quils
Tremblingly down the falling flights ;

Who saved themselves in waking
The waste of being something.
And danced traditionally
To nothingness and never ;

With only a last memory
Punishing this foolish pair
That nearly lived and loved
In one night mare"

— LAURA RIDING

ಆತ್ಮಹತ್ಯೆಯ ಮನಸ್ಸನ್ನು ಕುರಿತು ಬಹಳ ದಿನಗಳಿಂದ ಬರೆಯಬೇಕೆಂದಿದ್ದೆ. ಆದರೆ ಹಾಗೆ ಯೋಚಿಸಿದಂತೆಲ್ಲ ಒಟ್ಟು ವಿಷಯ ಸಂಕೀರ್ಣವಾಗುತ್ತಾ ಹೋಗುತ್ತಿತ್ತು. 'ಬದುಕು' ಎಂದರೆ ಹೀಗೆ ಎಂದು ಬಿಳಿಯ ಕಾಗದದ ಮೇಲೆ ಏನೇನೋ ಗೀಚಿದರೂ ಕೊನೆಗೂ 'ನಾನು ಅದಲ್ಲ' ಎಂದು ಬದುಕು ನಗೆಯಾಡುತ್ತಿರುತ್ತೆ. ನಮ್ಮ ನಗುವಿನ ನಡುವೆ-ಅಳುವಿನ ನಡುವೆ ಇರುವ ಅಂತರವನ್ನು ಅಳೆಯುವಾಗಲೆಲ್ಲ ವಿಚಿತ್ರ ರೀತಿಯ ಹಿಂಸೆಯನ್ನು ಎದುರಿಸುತ್ತಿರುತ್ತೇವೆ. ಜೀವನದಲ್ಲಿ 'ಪರಮಸುಖಿ ಹಾಗೂ ಅಸುಖಿ'ಯ ಕಲ್ಪನೆಗಳನ್ನು ಕುರಿತು ಬಣ್ಣಿಸಿದಂತೆಲ್ಲ ಒಟ್ಟು ಮೊತ್ತದ ಸೂಕ್ಷ್ಮ ಸಂಬಂಧಗಳು ಗೋಚರಿಸುವುದೇ ಇಲ್ಲ. ಈ ದೃಷ್ಟಿಯಿಂದ ದೊಡ್ಡ ಸಿದ್ಧಾಂತವನ್ನು ಹೇಳುವುದು ನನ್ನ ಉದ್ದೇಶವಲ್ಲ. ಯಾಕೆಂದರೆ ಅದು ಇದೆ; ಯಾಕಿದೆ? ಎಂಬ ಪ್ರಶ್ನೆಯ ಸುತ್ತ ತಿರುಗಾಡಬೇಕೆಂಬುದು ನಾನಾ ಕ್ಷಣಗಳಲ್ಲಿ ಮೂಡಿಬಂದದ್ದು. ಅದೇ ಸಮಯದಲ್ಲಿ ಮನುಷ್ಯನ ಮಹೋನ್ನತ ಗುರಿಗಳು ನಶ್ವರ ಅನ್ನಿಸಿದಾಗಲೋ ಅಥವಾ ಆ ಗುರಿಯ ತುತ್ತ ತುದಿಯನ್ನು ತಲುಪದಿದ್ದಾಗ ಆವರಿಸುವ ಗಾಢಾಂಧಕಾರದ ಸ್ವರೂಪವನ್ನು ಯಾವ ರೀತಿಯಲ್ಲಿ ಹಿಡಿದಿಡಲು ಪ್ರಯತ್ನಿಸಬೇಕು ಎಂಬುದು ಬರವಣಿಗೆಯ ಕ್ರಿಯೆಯಾಗಬಹುದು. ನಾವೆಲ್ಲ ನಗುತ್ತಿರುವಾಗಲೇ ಮನಸ್ಸಿನ ಯಾವುದೋ ಮೂಲೆಯಲ್ಲಿ ದುಃಖ ಮಡುಗಟ್ಟಿರುತ್ತೆ. ಈ ಕಾರಣಕ್ಕಾಗಿ ಸದಾ ತುಂಟತನದಿಂದ ನಲಿದಾಡುವ ಹುಡುಗ-ಹುಡುಗಿಯರು ಇದ್ದಕ್ಕಿದ್ದಂತೆ ದುಃಖದ ಹಿಡಿಯಾಗುವುದು ಜೀವನದ ಪ್ರತಿ ಕ್ಷಣಗಳಲ್ಲಿ ಆಕಸ್ಮಿಕವೇನೂ ಅಲ್ಲ.

ನಾವೆಲ್ಲಾ ಸಿಸಿಫಸನ ಪರಂಪರೆಯವರೇ, ಆಗಲಾಗದ್ದನ್ನು 'ಆಗು' ಮಾಡುವ ಹಠಮಾರಿತನದಲ್ಲಿ ಖುಷಿಗೊಳ್ಳುವ ಜಾಯಮಾನದವರೇ. ಆದರೆ ಪಕ್ಕನೆ ಖುಷಿಯ ಸ್ಥಾನದಲ್ಲಿ 'ನಿರಾಶೆ' ಎಂಬ ಕಪ್ಪುಮೋಡ ಇಡೀ ಬೆಳ್ಳನೆಯ ನಕ್ಷತ್ರಗಳನ್ನು ಮುಚ್ಚಿ ಬಿಡುವ ಸಾಧ್ಯತೆಯೇ ಜಾಸ್ತಿ. ಎಂಥ ಕಷ್ಟಗಳ ನಡುವೆಯೂ ಬದುಕಬೇಕು ಅಂದುಕೊಳ್ಳು

ತ್ತಲೇ ಬದುಕುತ್ತಿರುತ್ತೇವೆ. 'ಕಲ್ಲುಮನಸ್ಸು' ಮಾಡಿಕೊಂಡು ಬದುಕುತ್ತಿರುತ್ತೇವೆ. ನಾಳೆಯ ಬೆಳಕಿನ ದಿನಗಳಿಗಾಗಿ ಕಾಯುತ್ತ ಕೂರುತ್ತೇವೆ. ಕೊನೆಗೂ ಎಷ್ಟು ದಿನ ಕಾಯುವುದು ಎಂಬ ಒಂದೇ ಒಂದು ಸಣ್ಣ ತೀರ್ಮಾನ ಎಂಥ ಗಟ್ಟಿ ಮನಸ್ಸನ್ನು ಛಿದ್ರ ಮಾಡಲು ಸಾಧ್ಯ. ಆದರೆ ನಾವ್ಯಾರು ಬೇರೆಯವರ ಬದುಕನ್ನು ಕುಟುಕಿದರೆ, ಎಳೆಯಲು ಆಗುವುದಿಲ್ಲ. 'ಆತ್ಮಹತ್ಯೆ'ಯ ಮೂಲಕ ಸಂಭವಿಸಬಹುದಾದ 'ಸಾವು' ಅಷ್ಟೇ. ಗೊತ್ತಿಲ್ಲದ ವ್ಯಕ್ತಿಯೊಬ್ಬ ಚೂರಿ ಹಾಕಿ ಹೋದಂತೆ. ಅಥವಾ ಸದಾ ನಮ್ಮೊಡನಿರುವ ವ್ಯಕ್ತಿಯೇ ನಾನಾ ರೀತಿಯ ಮುಖವಾಡಗಳ ಮೂಲಕ ಬದುಕಿಗೆ ಗುದ್ದಿ ಹೋದಹಾಗೆ. ಅಥವಾ ನಮಗೆ ಗೊತ್ತಿಲ್ಲದ ಅನಾಮಿಕ ವ್ಯಕ್ತಿ ನಮ್ಮೊಳಗೆ ಗುಮ್ಮನಂತೆ ಕೂತಿರಬಹುದು. ಈ ಗುಮ್ಮನನ್ನು ಹೆಚ್ಚು ವಿಸ್ತರಿಸುವುದು ಬೇಡ.

'ಆತ್ಮಹತ್ಯೆ' ಅತ್ಯಂತ ಸೂಕ್ಷ್ಮ ಮನಸ್ಸಿನ ಹಿಂದೆ ಕೆಲಸ ಮಾಡುವ ಕ್ರಿಯೆ. ಇನ್ನು ಮುಂದೆ ಈ ಬದುಕಿನಲ್ಲಿ ಏನನ್ನೂ ನನ್ನಿಂದ ಸ್ವೀಕರಿಸಲಾಗುವುದಿಲ್ಲ ಎಂಬ ತಾತ್ಕಾಲಿಕ ಉನ್ಮಾದದಿಂದ ಬಂದಿರಬಹುದು—ತೀರ್ಮಾನದಿಂದ ಬಂದಿರಬಹುದು. ಆದರೂ ಬದುಕಿನ ಅದಮ್ಯತೆಯ ಹಿಂದಿರುವ ಕಳಕಳಿಯನ್ನು ಕಳೆಕೊಂಡಿರುವುದಿಲ್ಲ ಅನ್ನಿಸುತ್ತೆ. ಇತ್ತೀಚೆಗೆ ಪತ್ರಿಕೆಯ ಒಂದು ಸುದ್ದಿ ನನ್ನ ಮನಸ್ಸನ್ನು ನಡುಗಿಸಿತು, ದಿನನಿತ್ಯ ಪತ್ರಿಕೆಯಲ್ಲಿಯ ಸಾವಿನ ಸುದ್ದಿಗಳಿಗೆ ಕೊರತೆಯಿಲ್ಲ. ಸೀಮೆಎಣ್ಣೆ ಸುರಿದುಕೊಂಡು ಬೆಂಕಿಹಚ್ಚಿಕೊಂಡು ಸಾವನ್ನು ಬರಮಾಡಿಕೊಳ್ಳುವ ಘಟನೆಗಳಿಗೆ ಕೊರತೆಯಿಲ್ಲ. ಇಂಥದೇ ಘಟನೆಯಿಂದ ರೂಪುಗೊಂಡ ಆತ್ಮಹತ್ಯೆ-ಸಾವಿನ ಸುದ್ದಿ ಅದು : ಆಕೆ ಎಣ್ಣೆ ಸುರಿದುಕೊಂಡು ಬೆಂಕಿಯಿಟ್ಟುಕೊಂಡಳು. ಗಂಡ ಓಡಿಬಂದು ಅವಳನ್ನು ಬದುಕಿಸಲು ಪ್ರಯತ್ನಿಸಿದ. ಸುಡುವ ಮೈಯಿಂದ ಗಂಡನನ್ನು ಅಪ್ಪಿಕೊಂಡಳು. ಆಗ ಅವಳಿಗೆ ಸಾವು ಬೇಕಿರಲಿಲ್ಲ. ಬದುಕು ಮತ್ತೆ ಬೇಕೆನಿಸಿತು. "ನನ್ನನ್ನು ಬದುಕಿಸು ಬದುಕಿಸು"* ಎಂದು ಚೀರುತ್ತಲೇ ಗಂಡನನ್ನು ತನ್ನ ಸುಡುವ ಮೈಯಲ್ಲಿ ಕರಗಿಸಿಕೊಂಡುಬಿಟ್ಟಳು. ಈ ಸುದ್ದಿ ಮನಸ್ಸಿನಲ್ಲಿ ಇನ್ನೂ ಮಾಸಿರಲಿಲ್ಲ. ಒಂದೂವರೆ ವರ್ಷದಿಂದ ನೋಡಿದ ಒಬ್ಬ ಗೆಳತಿಯನ್ನು ನೋಡಲು ಹೋದೆ. ಅವಳು ಶೂದ್ರದ ಸದಸ್ಯೆಯಾಗಿದ್ದಳು. ಮನಸ್ಸು ಬಂದಾಗ ಒಂದೆರಡು ವರ್ಷದ ಚಂದಾ ಕೊಟ್ಟುಬಿಡುತ್ತಿದ್ದಳು. ಕಾಲೇಜಿನಲ್ಲಿ ಅಧ್ಯಾಪಕಿಯಾಗಿದ್ದಳು. ಮಾತಿಗಿಂತ ಮೌನವೇ ಅವಳ ಬಂಡವಾಳವಾಗಿತ್ತು. ಆದರೆ ಅವಳ ಕಣ್ಣಿನೊಳಗಿನ ಕಾಂತಿಗೆ ಮೌನ ಗೊತ್ತಿರಲಿಲ್ಲವಾದ್ದರಿಂದ ಯಾರಿಗೆ ಬೇಕಾದರೂ ಒಳ್ಳೆಯ ಗೆಳತಿಯಾಗಿ ಬಿಡುವ ಅವಕಾಶಗಳಿಗೆ ಕೊರತೆಯಿರಲಿಲ್ಲ. ಎಷ್ಟೋ ಬಾರಿ ನಾವು ಇಂಥ 'ಅನಾಥೆ'ಯರಿಗೆ ಹತ್ತಿರವಾಗದೆ ದೂರಮಾಡಿಕೊಂಡಿರುತ್ತೇವೆ ಅನ್ನಿಸುತ್ತೆ. ಹಾಗೆ ನೋಡಿದರೆ ಅವಳ ವೈಯಕ್ತಿಕ ಬದುಕಿನ ದುಃಖದುಮ್ಮಾನಗಳು ಯಾವ ರೀತಿಯ

* ಈ ಘಟನೆಯನ್ನು ಕಂಡವರು ಹೇಳಿದ್ದು.

ವರ್ತುಲದಲ್ಲಿ ನರಳುತ್ತಿರುತ್ತವೆ ಎಂಬುದಕ್ಕೆ ಪರಕೀಯರಾಗಿರುತ್ತೇವೆ ಎನ್ನುವುದಕ್ಕೆ ಅವಳ ಸಾವಿನ ಸುದ್ದಿ ನಿಜವಾಗಿಯೂ ಆ ದಿನ ನನ್ನನ್ನು ನಡುಗಿಸಿತು.

ಅದೊಂದು ದಿನ ಅವಳ ಕಾಲೇಜಿಗೆ ಹೋದೆ. ಶೂದ್ರಕ್ಕೆ ಆಜೀವ ಚಂದಾ ಕೇಳುವ ಎಂದು. ಅಧ್ಯಾಪಕರ ಕೊಠಡಿಯಲ್ಲಿ ನೋಡಿದೆ ಕಾಣಲಿಲ್ಲ. ಯಾವ ತರಗತಿಯಲ್ಲಿಯೂ ಇರಲಿಲ್ಲ, ಇದಾದ ನಂತರ ಒಂದು ವಾರ ಬಿಟ್ಟು ಹೋದೆ. ಹುಡುಗರು ಕಾಣಲಿಲ್ಲ. ಲೇಡಿ ಪ್ರಿನ್ಸಿಪಾಲ್ ಕಾಣಿಸಿಕೊಂಡರು, "ಯಾರು ಬೇಕಾಗಿತ್ತು ?" ಎಂದರು. ಹೆಸರು ಹೇಳಿದೆ. ಒಂದು ಕ್ಷಣ ಆಕೆ ನನ್ನ ಮುಖವನ್ನೇ ನೋಡಿ ನಂತರ "ಯಾಕೆ ಗೊತ್ತಿಲ್ಲವಾ ?" ಎಂದರು. ಆ ಕ್ಷಣದಲ್ಲಿ ನಾನೇನು ಹೇಳಬೇಕೋ ಗೊತ್ತಾಗದೆ "ಏನು" ಎಂದೆ. "ಆಕೆ ಕಳೆದ ನವೆಂಬರ್‌ನಲ್ಲೇ ತೀರಿಕೊಂಡಳು. ಪಾಪ ಒಳ್ಳೆಯ ಹುಡುಗಿ" ಎಂದರು. ವ್ಯಥೆಯಿಂದ ನಾನಾ ಪ್ರಶ್ನೆಗಳನ್ನು ಕೇಳಿದೆ. ಆ ಪ್ರಶ್ನೆಗಳಿಗೆಲ್ಲ ಉತ್ತರ ಸಿಗಲಿಲ್ಲ. ಅಥವಾ ಆ ಉತ್ತರಗಳೆಲ್ಲ ವ್ಯರ್ಥ ಅನ್ನಿಸಿತು. ಕೊನೆಗೆ ಆಕೆಗೆ ಗುಡ್‌ಬೈ ಹೇಳಿ ಹೊರಗೆ ಬರುವಾಗ "ಲೇಟೆಸ್ಟ್ ಶೂದ್ರವನ್ನು ಪೋಸ್ಟ್ ಮಾಡಿದ್ದೆ." ಎಂದೆ." ಸಾರಿ ಅದೆಲ್ಲ ಒಂದೂ ಗೊತ್ತಿಲ್ಲ ನನಗೆ" ಎಂದರು. ರಸ್ತೆಗಿಳಿದೆ. ಏನೂ ಯೋಚಿಸಲು ಆಗಲಿಲ್ಲ. ಸ್ವಲ್ಪ ದೂರದಲ್ಲಿದ್ದ ಹೋಟಲಿಗೆ ಹೋಗಿ ಮುಖದ ಮೇಲೆ ತಣ್ಣೀರು ಹಾಕಿಕೊಂಡು ಕಾಫೀ ಕುಡಿಯಲು ಕೂತೆ. ಅವಳು ಇದ್ದಿದ್ದರೆ ಅಪರೂಪಕ್ಕೆ ಬಂದಿದ್ದೀಯಾ ಬಾ ಶೂದ್ರ ಎಂದು ತನ್ನ ಸ್ಟ್ಯಾಫ್ ರೂಮಿಗೆ ಕಾಫೀ ತರಿಸಿಕೊಡುತ್ತಿದ್ದಳು ಅಂದುಕೊಂಡೆ. ತಕ್ಷಣವೇ ಅವಳ ಸಾವಿನ ಹಿಂದಿನ ಭೂತದ ಕೈಕಾಲುಗಳು ಸುತ್ತಲೂ ಚಾಚಿ ದೊಪ್ಪನೆ ಬಿದ್ದುಕೊಂಡವು. ಕೊನೆಗೆ ಅವಳ ಹೆಸರನ್ನು 'ಶೂದ್ರ'ದ ಚಂದಾದಾರರ ಪಟ್ಟಿಯಿಂದ ತೆಗೆಯುವಾಗ ಮತ್ತೊಮ್ಮೆ ಚಂದ್ರಿಕಾ ನೆನಪಾದಳು. ಕೊನೆಗೂ ಅವಳ ಅವಳಿ ಮಕ್ಕಳನ್ನು ಹೋಗಿ ನೋಡಲಿಲ್ಲವಲ್ಲ ಎಂಬ ವಿಷಾದ ಕಪ್ಪಾಗತೊಡಗಿತು. ದಯವಿಟ್ಟು ಕ್ಷಮಿಸಿ, ಇಂಥ ವಿಷಯಗಳ ಬಗ್ಗೆ ಪ್ರಸ್ತಾಪಿಸುವಾಗ ಯಾವ ರೀತಿಯ ನಿರ್ಲಿಪ್ತತೆಯನ್ನುಳಿಸಿಕೊಳ್ಳಬೇಕು ಎಂಬುದನ್ನು ಕಂಡುಕೊಳ್ಳಬೇಕಾಗಿದೆ. ಆದರೆ ನಿರ್ಲಿಪ್ತತೆ ಎಂಬುದನ್ನು ನಾವು ನಿಜವಾಗಿಯೂ ಆರೋಪಿಸಿಕೊಳ್ಳುವುದು ಸುತ್ತಲಿನವರಿಗಾಗಿ, ನಮಗಾಗಿ ಅಲ್ಲ. ಬಹಳಷ್ಟು ಬಾರಿ ನಾವು ನಮಗಾಗಿ ಬದುಕುವುದಿಲ್ಲ. ಬೇರೆಯವರಿಗಾಗಿ ಬದುಕುತ್ತಿರುತ್ತೇವೆ. ಬೇರೆಯವರನ್ನು ಮೆಚ್ಚಿಸುವುದರಲ್ಲಿಯೇ ಅರ್ಧ ಬದುಕನ್ನು ಮುಗಿಸಿರುತ್ತೇವೆ. ಮತ್ತೊಂದು ಹಂತದಲ್ಲಿ ದರಿದ್ರ ಭಟ್ಟಂಗಿಗಳಾಗುವ ಭಯದಲ್ಲಿ ನರಳುತ್ತಿರುತ್ತೇವೆ. ಈ ನರಳಾಟವೂ ಆತ್ಮಹತ್ಯೆಯ ಸ್ವರೂಪವೇ ಆಗಿರುತ್ತೆ. ಯಾಕೆಂದರೆ ಕೆಲವರು ಜೀವನದಲ್ಲಿ ಪ್ರತಿಭಟನೆಯೇ ಇಲ್ಲದೆ ಬದುಕುವುದನ್ನು ಕಂಡಾಗ ಭಯವಾಗುತ್ತೆ. ಮತ್ತೆ ಎಷ್ಟು ಚೆನ್ನಾಗಿ ಬದುಕುತ್ತಿದ್ದಾರೆ ಎಂದು ಮನಸ್ಸು 'ವ್ಯಂಗ್ಯ' ವಾಡುತ್ತೆ

ದಿನನಿತ್ಯದ ನೂರಾರು ಕ್ರೈಸಿಸ್‌ಗಳಲ್ಲಿ ಎಷ್ಟೊಂದು ಸಮಸ್ಯೆಗಳು ? ಸುಖದ ಬದುಕು-ಸುಖದ ಸಂಸಾರ ಇವೆರಡರ ಹಿಂದೆ ಮುಂದೆ ಯಾವ ರೀತಿಯ ವಿವರಣೆಯನ್ನು ಜೋಡಿಸಬೇಕು. ಪ್ರಜ್ಞೆ ಯಾಕೆ ಸದಾ ಏಕಮುಖಿಯಾಗಿರುವುದಿಲ್ಲ. ಏನೇನೋ ತಲೆಗೆ ಹಚ್ಚಿಕೊಂಡು ನರಳುವುದೇಕೆ 'ಪಾಲಿಗೆ ಬಂದದ್ದು ಪಂಚಾಮೃತ' ಎಂಬ ಮಾತನ್ನು ಸರಳವಾಗಿ ಬದುಕಿನ ಗತಿ ಚಕ್ರದೊಳಗೆ ಸ್ವೀಕರಿಸಬಾರದೇಕೆ ? ಎಂದು ಬರೆದಿಟ್ಟು ಕೊಂಡಾಗ ಎಷ್ಟೋಂದು ಜೊಗಳೆ ಅನ್ನಿಸುತ್ತೆ. ಅದೇ ರೀತಿಯಲ್ಲಿ ನಮ್ಮಲ್ಲಿಯೂ ಕೆಲವು ಕ್ರಾಂತಿಕಾರಿ ಹುಡುಗಿಯರು (?) ಸಭೆ-ಧರಣೆಗಳಲ್ಲಿ ಧಿಕ್ಕಾರದ ನಾಮಫಲಕಗಳನ್ನು ಪ್ರದರ್ಶಿಸುವಾಗ ಸಮಸ್ಯೆಗೆ ಉತ್ತರಗಳನ್ನು ಹುಡುಕಲು ಪ್ರಯತ್ನಿಸಿದ್ದೇನೆ. ಬೀದಿನಾಟಕಗಳಲ್ಲಿ ವರದಕ್ಷಿಣೆಯ ವಿರುದ್ಧ ಹಸಿಹಸಿಯಾದ ವಾಕ್ಯಬಂಧಗಳು ಹೊರಚಿಮ್ಮುವಾಗ ರೋಸಾ ಲುಕ್ಸೆಂಬರ್ಗ್‌ಳಂಥ ಅಪ್ಪಟ ಕ್ರಾಂತಿಕಾರಿ ಹೆಣ್ಣು ತಾನು ಪ್ರೀತಿಸಿದ ಗಂಡಿನೊಡನೆ ಬೆಳೆಸಿಕೊಂಡಿದ್ದ ಭಿನ್ನಾಭಿಪ್ರಾಯದ ಮೊತ್ತದ ಬಗ್ಗೆ ನಾವ್ಯಾರೂ ಗಂಭೀರವಾಗಿರುವುದೇ ಇಲ್ಲ. ಇದೇ ದೃಷ್ಟಿಯಿಂದ ವಿಭಾಮಿಶ್ರಳ ಪ್ರಶ್ನೆಯೂ ಸಹ. ಕೆಲವು ಹುಡುಗಿಯರು ಬಂದು ಬಿ. ವಿ. ಕಾರಂತರ ಬಗ್ಗೆ ಏನನ್ನಿಸುತ್ತೆ ಎಂದು ಕೇಳಿದರು. ಮಗುವಿನಂಥ ಮನಸ್ಸಿನ ವ್ಯಕ್ತಿ ಎಂದೆ. ಸಿಡಿಮಿಡಿಗೊಂಡರು. ಅವರ ಸಿಡಿಮಿಡಿಯನ್ನು ಕಂಡು ಸಿಟ್ಟಾಗಲಿಲ್ಲ. ಯಾಕೆಂದರೆ ಅವರ ಸಿಡಿಮಿಡಿಯೂ ಸ್ವಾಭಾವಿಕ ಅನ್ನಿಸಿತು. ಆದರೆ ಅದಕ್ಕಿಂತ ಮಿಗಿಲಾಗಿ ವಿಭಾಮಿಶ್ರಳನ್ನು ತುಂಬ ಹತ್ತಿರದಿಂದ ಕೆಲವು ದಿನ ನೋಡಲು ಸಾಧ್ಯವಾಗಿದ್ದರಿಂದ ಒಟ್ಟು ಘಟನೆ ನನ್ನನ್ನು ಮೌನಿಯಾಗಿಸಿತ್ತು. ವಿಭಾ ಕೂಡ ಅತ್ಯಂತ ಭಾವುಕ ಹುಡುಗಿಯೆಂಬುದು ಅವಳನ್ನು ಬಲ್ಲ ಎಲ್ಲರಿಗೂ ಗೊತ್ತಿರುವ ವಿಷಯವೇ ಆಗಿದೆ. 1981ರ ಜನವರಿಯಲ್ಲಿ ದೆಹಲಿಯ ಚಳಿ ನಮ್ಮನ್ನು ನಡುಗಿಸುತ್ತಿದ್ದ ಸಮಯ. ಕಾರಂತರಿಗೆ 'ಪದ್ಮಶ್ರೀ' ಪ್ರಶಸ್ತಿ ಬಂದಿದ್ದನ್ನು ತಿಳಿದು ಅವರನ್ನು ಅಭಿನಂದಿಸಲು ಅವರ ಮನೆಗೆ ಹೋದೆವು. ಹೋಗುವಾಗ ನನ್ನ ಜೊತೆಯಲ್ಲಿ ವಿಭಾ, ಅನಾಮಿಕ (ಮಾಜಿ ಕೇಂದ್ರ ಸಚಿವರಾಗಿದ್ದ ಹಕ್ಸರ್‌ರವರ ಮಗಳು ಈಗ ಅನಾಮಿಕ ಮಾಸ್ಕೋದಲ್ಲಿರಬಹುದು. ಬಹಳ ಸ್ವಾರಸ್ಯವೆಂದರೆ ನಾನು ಭಾರತೀಯ ಕಲೆಗಳ ಗುಣಗ್ರಹಣಾ ಶಿಬಿರದ 41ದಿನಗಳನ್ನು ಮುಗಿಸಿ ಹೊರಬರುವಾಗ ಮುದ್ದಾದ ಫೈಲ್ ಕೊಟ್ಟಿದ್ದರು. ಅದನ್ನು ನೋಡಿ ಆಗ ರಾಷ್ಟ್ರೀಯ ನಾಟಕ ಶಾಲೆಯ ವಿದ್ಯಾರ್ಥಿಯಾಗಿದ್ದ ಗೋಪಾಲಕೃಷ್ಣ ನಾಯರಿ ಕೇಳಿದ. ಕೊಟ್ಟೆ. ನಾಯರಿ ಬೆಂಗಳೂರಿಗೆ ವಾಪಸ್ಸು ಬಂದಾಗ ನಾಯರಿ ಫೈಲ್ ಹೇಗಿದೆ ? ಎಂದೆ. ಅನಾಮಿಕಗೆ ಕೊಟ್ಟೆ ಎಂದ. ನಕ್ಕು ಸುಮ್ಮನಾದೆ. ಹಾಗೆ ನೋಡಿದರೆ ಅನಾಮಿಕಳಿಗೆ ಇದ್ಯಾವುದರ ಕೊರತೆಯಿರಲಿಲ್ಲ.) ಮತ್ತು ಜಯತೀರ್ಥ ಜೋಶಿ ಇದ್ದರು. ಹಾದಿಯಲ್ಲಿ ವಿಭಾ ಮತ್ತು ಅನಾಮಿಕ "ಶೂದ್ರ" ನಿನ್ನ ತಂದೆ ತಾಯಿ ಎಷ್ಟು ಪ್ರೊಗ್ರೆಸಿವ್, ನಿನಗೆ "ಶೂದ್ರ" ಎಂದು ಹೆಸರಿಟ್ಟಿದ್ದಾರಲ್ಲ. ಇವತ್ತು

ಊಟಕ್ಕೆ ಬಿರಿಯಾನಿ ಕೊಡಿಸ್ತೀವಿ ಅಂದರು. ತಕ್ಷಣ ಏನೂ ಹೇಳಲಾಗಲಿಲ್ಲ. ಯಾಕೆಂದರೆ ಎನ್.ಎಸ್.ಡಿಯ ಗೆಳೆಯರೆಲ್ಲ 'ಶೂದ್ರ' ಎಂದು ಕರೆಯುತ್ತಿದ್ದರೂ ಕೆಲವರಿಗೆ ಶೂದ್ರ ಪತ್ರಿಕೆ ತರುತ್ತಿರುವುದು ಗೊತ್ತಿತ್ತು. ಕೊನೆಗೆ ಕಾರಂತರ ಮನೆಯಿಂದ ವಾಪಸ್ಸು ಬಂದು ಊಟಕ್ಕೆ ಕೂತಾಗ (ಅಂದು ಭಾನುವಾರವಾಗಿದ್ದರಿಂದ ಬಿರಿಯಾನಿ ವಿಶೇಷ ಊಟವಾಗಿತ್ತು) ವಿಭಾ ಹಾಗೂ ಅನಾಮಿಕಳ ಹೆಸರಿನಲ್ಲಿ ಬಿರಿಯಾನಿ ಬಂತು. ನನಗೆ ನಗು ತಡೆಯಲಾಗದೆ ವಿಷಯ ತಿಳಿಸಿದೆ. ತಟ್ಟೆ ಕಿತ್ತುಕೊಂಡರು. ಆಗ ಜೋಶಿ ಮತ್ತು ಮಾಲತಿ ತಮ್ಮ ಹೆಸರಿನಲ್ಲಿ ಕೊಡಿಸಿದರು. ಎನ್.ಎಸ್.ಡಿಯ ವಿದ್ಯಾರ್ಥಿಯಾಗಿದ್ದ ವಿಭಾ ಅತ್ಯಂತ ಪ್ರತಿಭಾವಂತೆ. ರಂಗದ ಮೇಲೆ ಬಂದು ನಿಂತರೆ ಸಾಕು, ಎಂಥಾ ಕೆಟ್ಟ ಪ್ರದರ್ಶನದಲ್ಲೂ ಮಿಂಚಬಲ್ಲ ಕಲಾವಿದೆಯಾಗಿದ್ದಾಳೆ. ಕಾರಂತರಷ್ಟೇ ಮುಗ್ಧ ಸ್ವಭಾವದ ಹುಡುಗಿ. ಹಾಗೆಯೇ ಕಾರಂತರ ಮುಂದೆ ಕೂತ ಯಾವ ವ್ಯಕ್ತಿಯೂ ಅವರನ್ನು ದ್ವೇಷಿಸಲು ಸಾಧ್ಯವಿಲ್ಲ. ಮಗುವಿನಂತೆ ತಮ್ಮ ಲೋಕದಲ್ಲಿ ವಿಹರಿಸುತ್ತಿರುತ್ತಾರೆ. ಒಂದು ದೃಷ್ಟಿಯಿಂದ ತೀರಾ ಮುಗ್ಧ ವ್ಯಕ್ತಿಗಳೇ ಆತ್ಮಹತ್ಯೆಯ ಹೊಸ್ತಿಲನ್ನು ತುಳಿಯುವುದು. ತಮ್ಮ ಸೋಲುಗಳನ್ನು ಎದುರಿಸದೆ ವಿಷಾದದ ಹಾದಿಯಲ್ಲಿ ಬಹಳ ದೂರಸಾಗದವರು.

ಓ ಕಗ್ಗತ್ತಲ ಬಾಗಿಲೇ
ಓ ಸಾವಿನ ಕಪ್ಪು ಕ್ಷಣವೇ
ಬಾ ಬಳಿಗೆ
ಈ ಬದುಕಿನ ಖಾಲಿತನದಿಂದ ಚೇತರಿಸಿಕೊಂಡೇನು
ಮತ್ತೆ ನನ್ನ ಕನಸಿನರಮನೆಗೆ ಹೋದೇನು

(ಅನು : ಗೋಪಾಲಕೃಷ್ಣ ಅಡಿಗ)

ಹರ್ಮನ್ ಹೆಸ್‌ನ ಈ ಪದ್ಯದ ಸಾಲುಗಳಂಥ ಭಾವನೆಗಳನ್ನು ಸದಾ ಗುನು ಗುನಿಸುತ್ತಿರಬಹುದು. ಮತ್ತೆ ಬಹು ಮುಖ್ಯ ಪ್ರಶ್ನೆಯೆಂದರೆ ಯೌವ್ವನದ ಗಡಿಯೊಳಗೆಯೇ ಬಹುಪಾಲು ಮಂದಿ ಆತ್ಮಹತ್ಯೆಗೆ ತೊಡಗುವುದು. ಇದೇ ಮಾತಿನ ನಡುವೆ ಬಹುದೂರ ಸಾಗಿದ್ದಾಗ ಪ್ರಸನ್ನ ಇತ್ತೀಚೆಗೆ ಜರ್ಮನಿಗೆ ಮತ್ತು ರಷ್ಯಾಗೆ ಹೋಗಿ ಬಂದಿದ್ದರು. ಅಲ್ಲಿಯ ಕೆಲವು ಲೇಖಕರು ಹಾಗೂ ಕಲಾವಿದರು ತಾವು ಏನನ್ನೂ ಇನ್ನು ಸೃಷ್ಟಿಸಲು ಸಾಧ್ಯವಿಲ್ಲವೆಂದಾಗ ಆತ್ಮಹತ್ಯೆ ಮಾಡಿಕೊಂಡ ಉದಾಹರಣೆಯನ್ನು ಕೊಡುತ್ತಾ ಹೋದರು. ಒಬ್ಬ ನಿಜವಾದ ಕಲಾವಿದ ಮುಪ್ಪು ತೀವ್ರಗೊಂಡಂತೆಲ್ಲ ಬಾಲ್ಯದ ಘಟನೆಗಳು ಅವನನ್ನು ಹೆಚ್ಚು ಬಾಧಿಸುತ್ತಾ ಹೋಗಬಹುದು. ಆಗ ತಾನು ಸೃಷ್ಟಿಸುತ್ತಿದ್ದ ಜೀವಕ್ರಿಯೆ ಬತ್ತಿ ಹೋದಾಗ ಸಾವು-ಹುಚ್ಚು-ಆತ್ಮಹತ್ಯೆ ಪ್ರಿಯವಾಗಬಹುದು.

ಹಿಂದುಳಿದ ರಾಷ್ಟ್ರಗಳ ಯುವಕ ಯುವತಿಯರಿಗೆ ಅಮೇರಿಕ ಇಂದು ನಾನಾ ರೀತಿಯ ಆಕರ್ಷಣೆಯನ್ನು ಒಡ್ಡುತ್ತಿದೆ. ಆದರೆ ಪ್ರತಿವರ್ಷ ಇಲ್ಲಿ ಸುಮಾರು ಮುವತ್ತು ಸಾವಿರಕ್ಕೂ ಮೇಲ್ಪಟ್ಟು ಆತ್ಮಹತ್ಯೆಗೆ ಗುರಿಯಾಗುತ್ತಿದ್ದಾರೆ. ಹೆಚ್ಚು ಹೆಚ್ಚು ನಿರಾಶವಾದಿಗಳಾಗುತ್ತಿರುವುದನ್ನು ಕಾಣಬಹುದು. ಒಂದು ದೃಷ್ಟಿಯಿಂದ ನಮ್ಮ ಯಾಂತ್ರಿಕ ಬದುಕು ಆಶಾವಾದದ ಎಲ್ಲ ದಾರಿಗಳನ್ನು ಮುಚ್ಚಿ ಬರೀ ಗ್ಲ್ಯಾಮರ್‌ಗಳನ್ನೇ ಸೃಷ್ಟಿಸಿ ಕೊನೆಗೆ ಪರಿಹಾರದ ಕ್ಷಣಗಳು ಗೊತ್ತಾಗದಂತೆ ಮಾಸಿಹೋಗಬಹುದು. ನಮ್ಮ ಚಲನ ಚಿತ್ರಗಳು, ದೂರದರ್ಶನ ಹಾಗೂ ಮಸಾಲ ಪತ್ರಿಕೆಗಳು ಬದುಕಿನ ವಾಸ್ತವತೆಯನ್ನು ಗಟ್ಟಿಗೊಳಿಸುವುದೇ ಇಲ್ಲ. ಹೀಗೆಲ್ಲ ಹೇಳುವಾಗಲು ಮನಸ್ಸಿನ ತಾತ್ಕಾಲಿಕತೆ ಎಷ್ಟೆಷ್ಟು ಅನಾಹುತಗಳನ್ನು ಮಾಡಿಬಿಡುತ್ತೆ ಅನ್ನಿಸುತ್ತೆ. ಸಿಟ್ಟಿನ ಬರದಲ್ಲಿ ಕೈಯೆತ್ತಿದ ಗಂಡ ತನಗೆ ಗೊತ್ತಿಲ್ಲದೆ ಹೆಂಡತಿಯನ್ನು ಕೊಲೆ ಮಾಡಬಹುದು. ಕೊನೆಗೆ ಹೆಂಡತಿಯ ಸಾವನ್ನು ಎದುರಿಸಲಾಗದೆ ತಾನೂ ಸಾವನ್ನು ಅಪ್ಪಿಕೊಳ್ಳಬಹುದು. ಇಂಥ ಕ್ಷಣಗಳಿಗೆ ಪರಿಹಾರವನ್ನು ಕರಾರುವಕ್ಕಾಗಿ ಬರೆದಿಡುವುದು ಎಷ್ಟು ಕಷ್ಟವಿರಬಹುದು. ತುಂಬ ಗಟ್ಟಿಮನಸ್ಸಿನವರೂ ಸಹ ದುರ್ಬಲ ಕ್ಷಣಗಳಿಗೆ ಪಕ್ಕಾಗದಿರರು. ಭಾರತದ ರಾಜಕಾರಣದಲ್ಲಿ ಇಂದಿರಾಗಾಂಧಿಯ ನಂತರ ಅತ್ಯಂತ ಗಟ್ಟಿ ಹೆಂಗಸೆಂದರೆ ತಾರಕೇಶ್ವರಿ ಸಿನ್ಹ. ಆಕೆಯ ಭಾಷಣದ ವೈಖರಿಯನ್ನು ನೋಡಿದಾಗ ಎಂಥವರಿಗೂ ಆಶ್ಚರ್ಯವಾಗದಿರದು. ಕಾಂಗ್ರೆಸ್ ಇಬ್ಭಾಗವಾದಾಗ ಬೆಂಗಳೂರಿನ ಪುರಭವನದಲ್ಲಿ ಶ್ರೀಮತಿ ಸಿನ್ಹ ಭಾಷಣ ಮಾಡುತ್ತಿದ್ದರು. ಕೆಲವು ಹುಡುಗರು ವೇದಿಕೆಯತ್ತ ಕಲ್ಲೆಸೆದರು. ಅದಕ್ಕಾವುದಕ್ಕೂ ಜಗ್ಗದ ಆಕೆ "ನನ್ನ ಪ್ರಾಣ ಹೋದರೂ ಭಾಷಣ ನಿಲ್ಲಿಸುವುದಿಲ್ಲ" ಎಂದು ಮುಂದುವರಿಸಿದರು. ಆಗ ಅಧ್ಯಕ್ಷತೆ ವಹಿಸಿದ್ದವರು ಭಾರತದ ರಾಜಕಾರಣದ ಗಪ್ಪ (ನಿಜಲಿಂಗಪ್ಪ) ಇದೇ ಸಿನ್ಹ ಕೆಲವು ವರ್ಷಗಳ ನಂತರ ಹುಚ್ಚಾಪಟ್ಟೆ ನಿದ್ರಾಗುಳಿಗೆಗಳನ್ನು ತಗೊಂಡು 65 ದಿನಗಳು ಪ್ರಜ್ಞಾಹೀನಳಾಗಿ ಪತ್ರಿಕೆಯಲ್ಲಿ ಸುದ್ದಿಯಾಗಿದ್ದಳು. ಮತ್ತೆ ಆಕೆ ಸಾರ್ವಜನಿಕ ಬದುಕಿಗೆ ಬಂದಿದ್ದೆ ಆಶ್ಚರ್ಯದ ಸಂಗತಿ.

ಇತ್ತೀಚೆಗೆ ಗೆಳೆಯ ನಾಗತಿಹಳ್ಳಿ ಚಂದ್ರಶೇಖರ್ ಸಿಕ್ಕಿದ್ದಾಗ ತನ್ನ ಊರಿನ ಒಂದು ಘಟನೆಯನ್ನು ಹೇಳಿದ : ತನ್ನ ಹಳ್ಳಿಯಲ್ಲಿಯ ಸ್ಥಿತಿವಂತ ಕುಟುಂಬವ ಹೆಣ್ಣು ತವರಿಗೆ ಹಬ್ಬಕ್ಕೆ ಹೋಗಬೇಕೆಂದಾಗ ಗಂಡ ಬೇಡ ಎನ್ನುವನು, ಅದಕ್ಕೆ ಮುನಿಸಿಕೊಂಡ ಆ ಹೆಣ್ಣು ತನ್ನ ಇಬ್ಬರು ಮಕ್ಕಳಿಗೆ ಅಲಂಕಾರ ಮಾಡಿ ಹತ್ತಾರು ಮಂದಿ ಕೆಲಸ ಮಾಡುತ್ತಿದ್ದ ತನ್ನ ತೋಟದ ಬಾವಿಗೆ ಬೀಳುವಾಗ ಮಕ್ಕಳನ್ನು ನಡುವಿಗೆ ಬಿಗಿದುಕೊಂಡು ಸತ್ತದ್ದು ಹೇಳುವಾಗ ; ಯಾವ ರೀತಿಯಲ್ಲಿ ಈ ಮನಸ್ಸಿನ ಸ್ವರೂಪವಿರುತ್ತೆ ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ಕೆಲವರಂತೂ ದಿನಾ ಸಾಯುವ ಸಿದ್ಧತೆಗೆ ತಮ್ಮನ್ನು ಅಣಿಗೊಳಿಸಿಕೊಳ್ಳುತ್ತಿರುತ್ತಾರೆ. ನಮ್ಮ ಮಧ್ಯಮ ವರ್ಗದ ಮನಸ್ಸೇ ಹೀಗೆ.

ದಿನಾ ಕೂಲಿ ಮಾಡುವ, ಬಿಕ್ಷೆ ಬೇಡಿ ತಿನ್ನುವ ಮಂದಿ ಇಂಥ ಕ್ರೂರ ಮನಸ್ಸನ್ನು ಬರ ಮಾಡಿಕೊಳ್ಳುವುದೇ ಇಲ್ಲ. ಬೀದಿಯಲ್ಲಿ ನಿತ್ರಾಣವಾಗಿ ಬಿದ್ದಿದ್ದರೂ : ನಾಯಿಗಳು ಬಂದು ಮೂಸಿನೋಡಿ ಹೋದರು ಉಸಿರಾಡುತ್ತ ಬದುಕಲು ಪ್ರಯತ್ನಿಸುತ್ತಾರೆ. ಪ್ರತಿಯೊಂದಕ್ಕು ತುಂಬ ಸೆನ್ಸಿಟೀವ್ ಆಗುವ ಓದು-ಬರಹ ಬಲ್ಲ ಅಥವಾ ಸಮಾಜದ ಏರು-ಪೇರುಗಳನ್ನು ಗ್ರಹಿಸುವ ಯುವಕ-ಯುವತಿಯರು ಬಹಳಷ್ಟು ಬಾರಿ ಬರ್ಬರ ಪ್ರಸಂಗಗಳನ್ನು ಎದುರಿಸಲಾರದವರು. "ಆದರ್ಶಸಂಬಂಧಗಳ ಬಗ್ಗೆ ಕನಸುಕಟ್ಟಬಹುದು. ಆದರೆ ಮಲಗುವ ಕೋಣೆಯಲ್ಲಿ ಏನಾಗುತ್ತದೆಂದು ಯಾರಿಗೆ ಗೊತ್ತಿರುತ್ತದೆ ?" ಎಂಬ ಶರ್ಮಿಳಾ ಠಾಕೂರಳ (ಪ್ರಜಾವಾಣಿಯ ನಾಲ್ಕು ನಿಟ್ಟಿನಿಂದ) ಮಾತನ್ನು ಗಮನಿಸಿದಾಗ: ಗಂಡು ಹೆಣ್ಣಿನ ನಡುವೆ ಒಂದು ಕಾಲದವರೆಗೆಪ್ರಧಾನವಾಗುವ ಲೈಂಗಿಕಕ್ರಿಯೆ ನಾನಾ ರೀತಿಯ ಗೊಂದಲದ ರೂಪಗಳನ್ನು ಸೃಷ್ಟಿಸಿ ಹೋಗಬಹುದು. ಎಲ್ಲ ಹಿಂಸೆಗಳನ್ನು ಸಹಿಸಿಕೊಂಡು ಒಂದು ದಿನ ಸ್ಫೋಟಗೊಳ್ಳುವ ಹಂತಕ್ಕೆ ತಲುಪಬಹುದು. ತಮ್ಮ ಕಷ್ಟಸುಖಗಳನ್ನು ಹೇಳಿಕೊಳ್ಳಲು ದೊರಕದೆ ಹೋದಾಗ : ಕವಿ, ನಾಟಕಕಾರ, ಕಾದಂಬರಿಕಾರ ಪಾರ್ ಲಾಗರ್ ಕ್ವಿಸ್ಟ್‌ನ ಈ ಕೆಳಗಿನ ಸಾಲುಗಳು ಮನಸ್ಸಿನಲ್ಲಿ ಸದ್ದು ಮಾಡುತ್ತ ಹೋಗಬಹುದು :

ಯೋಚನೆಗೆ ಎಲ್ಲಿಯೂ ಗುರಿ ಎಂಬುದಿಲ್ಲ
ಪ್ರಾರ್ಥನೆಗೆ ಒಬ್ಬನೂ ಪಿತ ದೊರೆಯಲಾರ.
ಎಲ್ಲಿಯೂ ಇಲ್ಲ ನೋವಿಗೊಂದು ಮನೆ
ಹಾತೊರೆಯುವಿಕೆಗೆಲ್ಲಿಯೂ ತಾಯಿಯಿಲ್ಲ (ಅನು : ಅಡಿಗ)

ಮುಂದೆ ಸೃಷ್ಟಿಯಾಗುವ ಜನಸಂಖ್ಯೆಯ ಒತ್ತಡ ; ಯಂತ್ರಯುಗದ ಮೂಲಕ ಹುಟ್ಟಿಕೊಳ್ಳುವ ಕೃತಕ ಆಮಿಷಗಳು ಒಟ್ಟು ಸಾಂಸಾರಿಕ ಸ್ವರೂಪವನ್ನು ಛಿದ್ರಛಿದ್ರಗೊಳಿಸಬಹುದು. ಹಾಗೆಯೇ ನಮ್ಮ ಹೆಣ್ಣು ಮಕ್ಕಳು ಆಶಿಸುವ 'ಸುಖಸಂಸಾರ'ದ ಕಲ್ಪನೆಗಳು ಕಳಕೊಂಡಾಗ ಹೆಚ್ಚು ಹಿಂಸೆಯನ್ನು ಎದುರಿಸಬೇಕಾಗುತ್ತೋ ಅಥವಾ ಅಂಥ ಕೃತಕ ವಾತಾವರಣಕ್ಕೆ ಒಗ್ಗಿಸಿಕೊಳ್ಳಲು ಪ್ರಯತ್ನಿಸಬಹುದೇ ಅನ್ನಿಸುತ್ತೆ. ಇದರ ಜೊತೆಗೆಯೇ ನಿರಂತರ ಪಿಡುಗಾಗಬಹುದಾದ ನಿರುದ್ಯೋಗ ಯುವಕ-ಯುವತಿಯರ ಮನಸ್ಸು ಯಾವ ಹಂತದಲ್ಲಿ ದುರ್ಬಲಗೊಳ್ಳಬಹುದು ಅದಕ್ಕೆ ನಮ್ಮ ಸಾಮಾಜಿಕ ಪರಿಸರ ಸೂಚಿಸುವ ಪರಿಹಾರ ಎಲ್ಲ ಭೀಕರವಾಗಿಯೇ ನಮ್ಮ ಮುಂದೆ ನಿಲ್ಲಬಹುದು. ಆಗ ಈ ಸಾವು ನೋವಿನ ಬಗ್ಗೆಯ ಅಂಕಿ-ಅಂಶಗಳು ವೃತ್ತ ಪತ್ರಿಕೆಗಳಿಗೆ ಆಹಾರವಾಗಬಹುದು.

**24-11-1986.** —ಶೂದ್ರ ಶ್ರೀನಿವಾಸ್

ಸಿರಿಗನ್ನಡಂ ಗೆಲ್ಗೆ : ಸಿರಿಗನ್ನಡಂ ಬಾಳ್ಗೆ :

ಭವ್ಯ ಪರಂಪರೆಯ ಸಂಕೇತ ಕರ್ನಾಟಕ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಸಂಪತ್ತಿನ ಆಗರ ಕಲಾ ಸರಸ್ವತಿ ನೆಲಸಿರುವ ಪುಣ್ಯ ಭೂಮಿಗೆ ಎರಡು ಸಹಸ್ರ ವರ್ಷಗಳಿಗೂ ಮೀರಿದ ವೈಭವಯುತ ಇತಿಹಾಸವುಳ್ಳ ಪುಣ್ಯ ಭೂಮಿ. ಇಂತಹ ಪವಿತ್ರ ಭೂಮಿಯ ಭಾಷೆ ಕನ್ನಡ. ಇದೊಂದು ಕಾವ್ಯ ಭಾಷೆ. ಅದರ ಪುನರುತ್ಥಾನವೇ ನಮ್ಮ ತಪಸ್ಸು. ಕನ್ನಡ ನಾಡು ತನ್ನ ಭವ್ಯ ಪರಂಪರೆಯನ್ನುಳಿಸಿಕೊಳ್ಳಲು ಕರ್ನಾಟಕ ಸರ್ಕಾರವು ಹಲವಾರು ಯೋಜನೆಗಳನ್ನು ಕೈಗೊಂಡಿದೆ. ಈ ಕಾರ್ಯಕ್ರಮಗಳು ಕನ್ನಡ ಅಭಿವೃದ್ಧಿ ಹಾಗೂ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ರೂಪಿಸಿರುವಂಥವು.

ಕನ್ನಡ ಅಭಿವೃದ್ಧಿ : ಕನ್ನಡವನ್ನು ಆಡಳಿತದ ಎಲ್ಲ ಹಂತಗಳಲ್ಲಿಯೂ ಪರಿಣಾಮಕಾರಿಯಾಗಿ ಬಳಕೆಗೆ ತರಲು ಸರ್ಕಾರ ಕೈಗೊಂಡಿರುವ ಯೋಜನೆಗಳು.

* ಸರ್ಕಾರದ ಅಧಿಕಾರಿಗಳಿಗೆ, ನೌಕರರಿಗೆ ತಮ್ಮ ದೈನಂದಿನ ಆಡಳಿತ ವ್ಯವಹಾರದಲ್ಲಿ ಕನ್ನಡವನ್ನು ಸಮರ್ಥವಾಗಿ ಬಳಸಲು ಆರು ದಿನಗಳ ಕಾರ್ಯ ಶಿಬಿರ.
* ಕನ್ನಡ ಬಾರದ ಸರ್ಕಾರಿ ಅಧಿಕಾರಿಗಳಿಗೆ, ನೌಕರರಿಗೆ ಅಂಚೆ ಮೂಲಕ ಕನ್ನಡ ಕಲಿಸುವ ಒಂದು ವರ್ಷದ ಯೋಜನೆ.
* ಸಾರ್ವಜನಿಕ ಉದ್ದಿಮೆಗಳ ಕನ್ನಡ ಸಿಬ್ಬಂದಿಗೆ ಸ್ಥಳೀಯ ಸಂಘ ಸಂಸ್ಥೆಗಳ ಸಹಾಯದಿಂದ ಕನ್ನಡ ಕಲಿಸುವ ಆರು ತಿಂಗಳ ಯೋಜನೆ.
* ನೆರೆ ರಾಜ್ಯಗಳ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಸಂಶೋಧನೆಯಲ್ಲಿ ತೊಡಗಿರುವ ವಿದ್ಯಾರ್ಥಿಗಳಿಗೆ ಶಿಷ್ಯವೇತನ.
* ಕನ್ನಡ ಭಾಷೆಯಲ್ಲಿ ಭಾರತದ ಸಂವಿಧಾನ, ರಾಜ್ಯ ಅಧಿನಿಯಮಗಳು, ಕಾನೂನು ಪುಸ್ತಕಗಳು ಮುಂತಾದುವುಗಳ ಪ್ರಕಟಣೆ.
* ಸರ್ಕಾರಿ ಇಲಾಖೆಗಳ ಇಂಗ್ಲೀಷ್ ಬೆರಳಚ್ಚುಗಾರರಿಗೆ ಹಾಗೂ ಶೀಘ್ರಲಿಪಿಗಾರರಿಗೆ ಕನ್ನಡ ಬೆರಳಚ್ಚು ಹಾಗೂ ಶೀಘ್ರಲಿಪಿಯಲ್ಲಿ ತರಬೇತಿ.
* ನಿರುದ್ಯೋಗಿ ಕನ್ನಡ ಬೆರಳಚ್ಚುಗಾರರಿಗೆ 'ಜಾಬ್ ಟೈಪಿಂಗ್'ಗಾಗಿ ಕನ್ನಡ ಬೆರಳಚ್ಚು ಯಂತ್ರ ಖರೀದಿಸಲು ಸಾಲದ ನೆರವು.
* ಪದವಿ ಮಟ್ಟದಲ್ಲಿ ಕನ್ನಡ ಮಾಧ್ಯಮ ತೆಗೆದುಕೊಂಡು ಓದುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ.
* ಕನ್ನಡ ಭಾಷೆಯನ್ನು ಆಡಳಿತ ಭಾಷೆಯಾಗಿ ಅನುಷ್ಠಾನಕ್ಕೆ ತರಲು ಕನ್ನಡ

ಸಾಹಿತ್ಯ ಮತ್ತು ಸಂಸ್ಕೃತಿ ಚಟುವಟಿಕೆಗಳು : ಕರ್ನಾಟಕ ಸರ್ಕಾರದ ವತಿಯಲ್ಲಿ ವಿವಿಧ ಅಕಾಡೆಮಿಗಳು ಸಾಹಿತ್ಯ ಮತ್ತು ಕಲೆಯ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ. ಪುರಾಣ ಮತ್ತು ಜಗತ್ಪ್ರಸಿದ್ಧ ಜನಪ್ರಿಯ ಗ್ರಂಥಗಳ ಪ್ರಕಟಣೆಗೆ ಧನಸಹಾಯ, ಕನ್ನಡ ಸಾಹಿತ್ಯ ಪರಿಷತ್ತು ಮುಂತಾದ ಸಂಘ ಸಂಸ್ಥೆಗಳಿಗೆ ಆರ್ಥಿಕ ಪ್ರೋತ್ಸಾಹ, ಸಾಂಸ್ಕೃತಿಕ ಕಾರ್ಯಕ್ರಮಗಳ ಅಂಗವಾಗಿ ಕಲಾವಿದರಿಗೆ ಪ್ರೋತ್ಸಾಹ, ಕಲಾವಿದರಿಗೆ ಗೌರವ ಧನ, ಮಾಸಾಶನ, ಅಶಕ್ತ ಕಲಾವಿದರಿಗೆ ವೈದ್ಯಕೀಯ ನೆರವು, ಗಣನೀಯಸೇವೆಗೈದ ಕಲಾವಿದರಿಗೆ ರಾಜ್ಯೋತ್ಸವ ಪ್ರಶಸ್ತಿ ಇದೇ ಮುಂತಾದುವುಗಳು ಸರ್ಕಾರ ಹಾಗೂ ಅಕಾಡೆಮಿಗಳಿಂದ ನಡೆಯುತ್ತಿರುವ ಚಟುವಟಿಕೆಗಳು.

"ಕರ್ನಾಟಕವಾರ್ತೆ"

# ಅಸಂಘಟಿತ ಕಾರ್ಮಿಕರ ಬದುಕಿಗೆ ಆಸರೆ ನೀಡುವ ಆಶಾಕಿರಣ

ಅಪಘಾತಗಳು ಹೇಳಿ ಕೇಳಿ ಸಂಭವಿಸುವುದಿಲ್ಲ; ಅತೀವ ಕಷ್ಟನಷ್ಟಗಳನ್ನು, ಅನಿರೀಕ್ಷಿತ ಆರ್ಥಿಕ ಮುಗ್ಗಟ್ಟನ್ನು ತರುತ್ತದೆ. ಕೃಷಿ ಕಾರ್ಮಿಕರು ಮತ್ತು ಕಾರ್ಮಿಕ ಸಂಘಟನೆಗಳಲ್ಲಿರದ ಕ್ಷೇತ್ರದ ಕೆಲಸಗಾರರಿಗೆ ಈ ಮಾತು ಅನ್ವಯಿಸುತ್ತದೆ. ಬಹುಪಾಲು ಪರಿಹಾರ ಯೋಜನೆಗಳ ವ್ಯಾಪ್ತಿಯಿಂದ ಹೊರಗುಳಿದಿರುವ ಅಂತಹಜನರ ಸಂಕಷ್ಟ ನಿವಾರಿಸಲು ಕರ್ನಾಟಕ ಸರ್ಕಾರ ವಿಶಿಷ್ಟ ಯೋಜನೆಯೊಂದನ್ನು ರೂಪಿಸಿದೆ.

**ಅರ್ಹತೆ:** 16 ರಿಂದ 65 ವರ್ಷಗಳ ಒಳಗಿನ, ವಾರ್ಷಿಕ ಆದಾಯ 6,000 ರೂ.ಗಳಿಗೆ ಮೀರದ ಈ ಮುಂದೆ ತಿಳಿಸಿದ ಕಸುಬುಗಳ ಮತ್ತು ಅವರ ಅವಲಂಬಿಗಳು ಈ ಯೋಜನೆಯನ್ವಯ ಆರ್ಥಿಕ ನೆರವು ಪಡೆಯುತ್ತಾರೆ. ಕಾರ್ಮಿಕರ ಪರಿಹಾರ ನಿಧಿ ಕಾಯಿದೆಯನ್ವಯ ಆರ್ಥಿಕ ಪರಿಹಾರ ಪಡೆದಿರುವವರು ಆಶಾಕಿರಣ ಯೋಜನೆಗೆ ಅರ್ಹರಾಗುವುದಿಲ್ಲ.

ಕೃಷಿ ಕಾರ್ಮಿಕರು, ಬೆಸ್ತರು, ಬೀಡಿ ಕಾರ್ಮಿಕರು, ಹೆಂಡ ಇಳಿಸುವವರು, ಧೋಬಿಗಳು, ಮೋಚಿಗಳು, ಬಡಗಿಗಳು, ಗಾಡಿತಯಾರಿಸುವವರು, ಗ್ರಾಮಾಂತರ ಕಮ್ಮಾರರು, ಅಕ್ಕಸಾಲಿಗರು, ಲೋಹ ಕೆತ್ತನೆಗಾರರು, ಪ್ರಾಣಿಗಳು ಎಳೆಯುವ ವಾಹನಗಳ ಚಾಲಕರು, ಸೈಕಲ್ ರಿಕ್ಷಾ ಎಳೆಯುವವರು, ಕ್ಷೌರಿಕರು, ದರ್ಜಿಗಳು, ರಸ್ತೆಯಲ್ಲಿ ಕೂಗಿ ಮಾರುವವರು, ಕೈಗಾಡಿ ಎಳೆಯುವವರು, ಬುಟ್ಟಿ ಹೆಣೆಯುವವರು, ಜಲ್ಲಿ ಒಡೆಯುವವರು, ಮಾಂಸ ಸಿದ್ಧಪಡಿಸುವವರು, ಗಾರೆ ಕೆಲಸಗಾರರು, ಹೆಂಚು ಕೆಲಸಗಾರರು, ಗುಡಿಸಲು ಕಟ್ಟುವವರು, ಛಾವಣಿ ಹೊದಿಸುವವರು, ಬಾವಿ ತೋಡುವವರು, ಕೈಮಗ್ಗ ನೇಕಾರರು, ಲೋಕೋಪಯೋಗಿ ಮತ್ತು ನೀರಾವರಿ ಯೋಜನೆಗಳ ಎನ್.ಎಂ.ಆರ್. ಕೆಲಸಗಾರರು ಹಾಗೂ ಗುಡ್ಡಗಾಡಿನ ಕಾರ್ಮಿಕರು.

**ವ್ಯಾಪ್ತಿ:** ಮೇಲೆ ಕಾಣಿಸಿರುವ ಶ್ರಮಜೀವಿಗಳು ದುಡಿಯುವಾಗ ಅಪಘಾತಕ್ಕೀಡಾಗಿ ಶಾರೀರಕ ಹಾನಿಗೊಳಗಾದಲ್ಲಿ ಅಂತಹವರಿಗೆ ಆಶಾಕಿರಣ ಯೋಜನೆಯಿಂದ ಆರ್ಥಿಕ ನೆರವು ಸಿಗುತ್ತಿದೆ.

**ಪರಿಹಾರ:** ಈ ಯೋಜನೆಯಂತೆ ಅಪಘಾತವಲ್ಲಿ ಕಾರ್ಮಿಕನ ಒಂದು ಅಂಗ ಹೀನವಾದರೆ, 2500 ರೂಪಾಯಿ ಎರಡು ಅಂಗಗಳ ಶಾಶ್ವತ ನಷ್ಟ ಉಂಟಾದರೆ 4,000 ರೂಪಾಯಿ ಹಾಗೂ ಅಪಘಾತದಲ್ಲಿ ಕಾರ್ಮಿಕನ ಮರಣ ಸಂಭವಿಸಿದರೆ ವಾರಸುದಾರರಿಗೆ 5,000 ರೂಪಾಯಿಗಳ ಪರಿಹಾರ ನೀಡಲಾಗುತ್ತದೆ.

**ಪಡೆಯುವ ಬಗೆ:** ಸೂಚನೆಯನ್ನು ಕೊಡಬೇಕು ಮತ್ತು 3 ತಿಂಗಳೊಳಗಾಗಿ ಅರ್ಜಿಯನ್ನು ನಮೂನೆ 2ರಲ್ಲಿ ಗ್ರಾಮಾಂತರ ಪ್ರದೇಶವಾದಲ್ಲಿ ತಾಲ್ಲೂಕಿನ ತಹಸೀಲ್ದಾರ್‌ರವರಿಗೆ, ನಗರ ಪ್ರದೇಶವಾದರೆ ಪುರಸಭೆಯ ಮುಖ್ಯಾಧಿಕಾರಿ ನಗರ ಸಭೆಯ ಕಂದಾಯ ಅಧಿಕಾರಿಗಳಿಂದ ಅರ್ಜಿಯನ್ನು ಸಲ್ಲಿಸಬೇಕು. ಹೆಚ್ಚಿನ ವಿವರಗಳಿಗೆ ಬರೆಯಿರಿ: ಆಯುಕ್ತರು ಕಾರ್ಮಿಕ ಇಲಾಖೆ, ವಿ.ಐ.ಎಸ್.ಎಲ್ ಕಟ್ಟಡ, ಜೆ.ಸಿ ರಸ್ತೆ, ಬೆಂಗಳೂರು-2

ಪ್ರಕಟಣೆ: ಕರ್ನಾಟಕ ವಾರ್ತೆ

F/NP/KRNU/72 No. M (2) PRB 211/73/74

Shoodra Kannada Monthly

ಜನವರಿ ಸಂಚಿಕೆಯಲ್ಲಿ :

ಪೂರ್ಣಿಮಾ—ಕೆ.ಪಿ. ಮೃತ್ಯುಂಜಯ—ಶ್ರೀಧರ ಪಿಸ್ಸೆ--ವಿಜಯರಾಘವನ್ ಉತ್ತನೂರು ರಾಜಮ್ಮ ವಿ. ಶೆಟ್ಟಿ —ಸವಿತಾ ನಾಗಭೂಷಣ—ಕೆ.ಎಸ್. ರಾಧಾಕೃಷ್ಣ—ಎಸ್.ಎಸ್. ಹಿರೇಮಠ—ಎಸ್.ಎನ್. ಪ್ರಸಾದ್—ಬಂದಗದ್ದೆ ರಾಧಾಕೃಷ್ಣ —ಅನಸೂಯಾದೇವಿ--ಅಳಗುಂಡಿ ಅಂದಾನಯ್ಯ--ಜಿ.ವಿ. ಆನಂದಮೂರ್ತಿ ಕನಸಿಗೊಂದು ಕಣ್ಣು ಇತ್ಯಾದಿ.



Printed at : Shalivahan Printers, Bangalore-53.
Editor & Publisher : M SRINIVAS